# ಪ್ರೇಮಚೂರ್ಣ

## ಓ ಹೆನ್ರಿಯ ಕತೆಗಳ ಅನುವಾದ



ಬಿ. ಕೆ. ರಾಮಚಂದ್ರರಾವ್, ಬಿ.ಎ., ಎಲ್.ಎಲ್.ಬಿ.



ಪ್ರಭಾತ ಸಾಹಿತ್ಯ

ಮಲ್ಲೇಶ್ವರಂ : ಬೆಂಗಳೂರು

ಶ್ರೀ ಬಬ್ಬರ್‌ಜಂಗ್ ರಾಮಚಂದ್ರರಾಯರು
ನಮ್ಮ ಕನ್ನಡದ ಬಾಳ ಉಸಿರಾದ
ಒಬ್ಬರು. ಒಳ್ಳೇ ಬರೆಹಗಾರರು, ಭಾಷಣಕಾರರು,
ಕನ್ನಡದ ಕೆಲಸಗಾರರು. ಅವರ
ಮಿತ. ಏನು ಮಾಡಿದರೂ ಚೊಕ್ಕವಾಗಿ ಮಾಡುವ ಸ್ವಭಾವ. ಅವರ ಕತೆಗಳಲ್ಲೂ ಆ ಚೊಕ್ಕತನ, ಸೂಕ್ಷ್ಮ ವಿವರ ನಿರೂಪಣೆ ಕಾಣುತ್ತವೆ.

ರಾಯರು ಚಿತ್ರದುರ್ಗದಲ್ಲಿ ಗಣ್ಯ ವಕೀಲರು, ಕರ್ನಾಟಕ ಸಂಘದ ಪ್ರಮುಖ ಕೆಲಸಗಾರರು. ಚಿಕ್ಕತನದಲ್ಲಿಯೆ ದೊಡ್ಡ ಸಂಸಾರಕ್ಕೆ ಹಿರಿಯರಾಗಿ ಬಾಳಿನ ಗಾಂಭೀರ್ಯವನ್ನೂ ಲಾಘವನ್ನೂ ಕಂಡುಕೊಂಡವರು. ಅಂತೆಯೆ ಅವರು ನಗಲೂ ಬಲ್ಲರು, ರೇಗಲೂ ಬಲ್ಲರು. ಅವರ ಕತೆಗಳಲ್ಲಿ ಹಗುರಾದ ನಗೆಯಿದ್ದರೆ ಅವರ ವಿಮರ್ಶೆಯಲ್ಲಿ ಕೂರಾದ ಪರಿಶೀಲನೆಯಿರುತ್ತದೆ.

ರಾಮು – ಎಂಬ ಹೆಸರಿನಿಂದ ಕತೆ, ಹರಟೆ, ಕಿರುಗತೆ, ನಾಟಕ, ವಿಮರ್ಶೆಗಳನ್ನು ರಾಯರು ಧಾರಾಳವಾಗಿ ಬರೆದಿದಾರೆ. ಅಮೆರಿಕದ ಸುಪ್ರಸಿದ್ಧ ಕತೆಗಾರ ಓ. ಹೆನ್ರಿಯ ಕತೆಗಳನ್ನು ಕನ್ನಡದಲ್ಲಿ ತಮ್ಮದೇ ಆದ ಒಂದು ಅಪ್ರತಿಮ ರೀತಿಯಲ್ಲಿ ಬರೆದಿದಾರೆ. ಅವನ್ನು ಇದರಲ್ಲಿ ಸೇರಿಸಿ ಕೊಡಲಾಗಿದೆ. ಇವುಗಳಲ್ಲಿ ಡೆಡೋನಿಯಾ ಎಂಬುದು ಮಾತ್ರ ಅನುವಾದವಲ್ಲ, ಸ್ವತಂತ್ರ.

ರಾಮಚಂದ್ರರಾಯರ ಬರೆವಣಿಗೆ ಪುಸ್ತಕರೂಪದಲ್ಲಿ ಬರುತ್ತಿರುವುದು ಇದೇ ಮೊದಲು.

———:———

# ಮುನ್ನುಡಿ

‘ರಾಮು’ ಅಥವಾ ಶ್ರೀ ಬಿ. ಕೆ. ರಾಮಚಂದ್ರರಾಯರು ಬರೆದ ಹಲವು ಸಣ್ಣ ಕತೆಗಳಲ್ಲಿ ಕೆಲವೊಂದು ಸಂಗ್ರಹಗೊಂಡು ಇದೀಗ ಪುಸ್ತಕರೂಪವಲ್ಲಿ ಬೆಳಕಿಗೆ ಬರುತ್ತಿರುವುದು ನನಗೆ ತುಂಬ ಸಂತೋಷವನ್ನುಂಟು ಮಾಡಿದೆ. ಅವರ ಕತೆಗಳು ‘ಓ. ಹೆನ್ರಿಯವರ ಇಂಗ್ಲಿಷ್ ಕತೆಗಳ ಅನುವಾದ’ ಎಂಬ ಟಿಪ್ಪಣಿಯೊಂದಿಗೆ—ಜಯಂತಿಯಲ್ಲಿ ಪ್ರಕಟನೆಗಾಗಿ—ಮೊದಲು ನನ್ನ ಕಡೆಗೆ ಬಂದುವು. ಓದಿನೋಡಿ ಮನಸಾರೆ ಮೆಚ್ಚಿದೆ. ‘ಅನುವಾದಿತ ಕತೆ’ ಎಂದು ಅವುಗಳನ್ನು ಕಡಿಮೆ ಬೆಲೆಯವುಗಳನ್ನಾಗಿ ಕಾಣಬಹುದಾದ ಭಾವನೆ ನನ್ನಲ್ಲಿ ಸ್ವಲ್ಪವೂ ತಲೆದೋರಲಿಲ್ಲ. ಒಂದೊಂದರಲ್ಲಿಯೂ ವಸ್ತುಚಮತ್ಕೃತಿ, ಪಾತ್ರ ಪರಿಪುಷ್ಟಿ, ಕಥನರೀತಿ ಹೊಸ ಹೊಸವಾಗಿಯೆ ಕಂಡುವು. ಆದರೆ ಯಾವ ಕತೆಯನ್ನು ಓದುತ್ತಿರುವಾಗಲೂ ಮೂಲ ಕತೆಗಾರನಾದ ಹೆನ್ರಿಯ ವಿದೇಶೀಯ ವಿಜಾತೀಯ [illegible] ತ್ತಿದ್ದುದು ಒಮ್ಮೆಯೂ ಕಾಣಲಿಲ್ಲ; ಎಲ್ಲೆಲ್ಲಿಯೂ ಕನ್ನಡಿಗ [illegible] ಕೆ. ರಾಮಚಂದ್ರರಾಯರ ವ್ಯಕ್ತಿತ್ವವೆ ನನಗೆ ಕಂಡಿತು. [illegible] ನಾನು ರಾಮಚಂದ್ರರಾಯರನ್ನು ಕಂಡವನಲ್ಲ; [illegible] ತಿಳಿದವನಲ್ಲ. ಅಂದು ಅವರ ಕತೆಗಳನ್ನು ಓದಿ ನನ್ನ [illegible] ವಿಷಯಕ್ಕೆ ಎಳೆಸಿತು; ಹೃದಯ ಅವರ ಸ್ನೇಹ [illegible] ಪ್ರೀತಿ—ಇಂತಹ ಕತೆಗಾರನೊಬ್ಬರು [illegible]—ಹೆಮ್ಮೆಯಾಗಿ ಪರಿಣಮಿಸಿತು. ಎಂತಲೆ ‘ರಾಮು’ [illegible] ಒಂದರ ಹಿಂದೊಂದರಂತೆ ಜಯಂತಿಯಲ್ಲಿ ಪ್ರಕಾಶಗೊಂಡುವು.

ಶ್ರೀ ರಾಮಚಂದ್ರರಾಯರ ಪ್ರತ್ಯಕ್ಷ ಪರಿಚಯ ನನಗಾದುದು ಮುಂದೆ ಬಹಳ ದಿನಗಳ ಮೇಲೆ. ಕಳೆದ ಡಿಸೆಂಬರ್ ([illegible]) ತಿಂಗಳ ಮೊದಲನೆಯ ವಾರದಲ್ಲಿ ಆಕಸ್ಮಿಕವಾಗಿ ಅವರನ್ನು ಮೊದಲನೆಯ ಸಲವೇ ಕಂಡು,

ಅವರೊಂದಿಗೆ ಕಳೆದ ೨-೩ ದಿನಗಳನ್ನು ನಾನೆಂದೂ ಮರೆಯೆನು. ತರುಣ ವಕೀಲರಾದರೂ ಸ್ವಂತದ ಬುದ್ಧಿವಂತಿಕೆಯ ಮೂಲಕ, ಚಿತ್ರದುರ್ಗದ ಒಳ್ಳೆಯ ವಕೀಲರಲ್ಲಿ ಒಬ್ಬರೆಂದು ಪರಿಗಣಿತರಾಗಿದ್ದಾರೆ; ಆದರೂ ಕನ್ನಡವನ್ನೂ ಕರ್ನಾಟಕವನ್ನೂ—ಪದ್ಧತಿಯಂತೆ - ಮರೆತುಬಿಟ್ಟಿಲ್ಲ. ವಕೀಲಿ ವ್ಯವಸಾಯವನ್ನು ಕಳೆಗೊಳಿಸಿಕೊಳ್ಳುವುದಕ್ಕಾಗಿ ಹಾಕಿದ ಸೋಗಲ್ಲ, ರಾಯರ ಕನ್ನಡದ ಪ್ರೀತಿ. ಸಾಹಿತ್ಯದಲ್ಲಿನ ಸಹೃದಯತೆಗಾಗಿ, ವಿಚಾರಜೀವಿಯ ಬುದ್ಧಿವಿಕಾಸದ ಅಪೇಕ್ಷೆಗಾಗಿ ಕನ್ನಡ ಸಾಹಿತ್ಯವನ್ನಿವರು ಅಭ್ಯಾಸ ಮಾಡುವರು; ನಗೆಗಾರರಲ್ಲದೆ ಬಗೆಗಾರರೂ ಆಗಿದ್ದಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಕನ್ನಡ ಪುಸ್ತಕಗಳನ್ನು ಬೆಲೆಕೊಟ್ಟು ಕೊಳ್ಳುವ ವಕೀಲರು ನಮ್ಮಲ್ಲಿ ಎಷ್ಟು ಜನರಿದ್ದಾರೆ? ಶ್ರೀ ರಾಮಚಂದ್ರರಾಯರು ಬೆಲೆಕೊಟ್ಟು ಕೊಳ್ಳುತ್ತಾರೆ; ವಿಮರ್ಶಕ ಬುದ್ಧಿಯಿಂದ ಓದುತ್ತಾರೆ; ವಿಚಾರಚರ್ಚೆ ನಡೆಯಿಸುತ್ತಾರೆ. ಮನೆತುಂಬ ಎಲ್ಲಿ ನೋಡಿದಲ್ಲಿ ಕಾಯಿದೆ ಪುಸ್ತಕಗಳು, ಇಲ್ಲವೆ ಕನ್ನಡ ಪುಸ್ತಕಗಳು.

ವಿವಿಧ ಭಾವ-ರಸಗಳನ್ನು ವಿಕಾಸಗೊಳಿಸಿ ತೋರಿಸಲು ತಕ್ಕವಾದ ವಸ್ತುಗಳನ್ನು ಒದವಿಸಿ ಕೊಡುವುದು ಜನಸಾಮಾನ್ಯರ ಜೀವನವೇ ಹೊರತು, ಕಟ್ಟು-ನಿಟ್ಟುಗಳಿಂದ ಕೂಡಿದ - ಸಾಂಪ್ರದಾಯಿಕ ರೀತಿಯಿಂದ ಬಾಳುವ - ಸುಸಂಸ್ಕೃತರ ಜೀವನವಲ್ಲ. ಜನಸಾಮಾನ್ಯರು ನಗಬೇಕೆನಿಸಿದಾಗ ಮನಸೋಕ್ತ ನಗುವರು; ಅಳಬೇಕೆನಿಸಿದಾಗ ಸ್ವೇಚ್ಛೆಯಾಗಿ ಅಳುವರು; ಕ್ರೋಧ-ಪ್ರೀತಿ-ಸಂತೋಷ-ಜುಗುಪ್ಸೆಗಳನ್ನು ನಿರಾತಂಕವಾಗಿ ಹೊರಕ್ಕೆ ಹಾಕುವರು. ಸುಸಂಸ್ಕೃತರಾದ ಸಿರಿವಂತರು ಅತ್ತರೂ ನಕ್ಕರೂ ಅದಕ್ಕೊಂದು ಕೃತ್ರಿಮತೆಯ ಮುಸುಕು ಇರುವುದು; ವಿವಿಧ ಭಾವಗಳನ್ನು ಪ್ರಕಟಿಸುವ ಸಂದರ್ಭಗಳನ್ನು ಅವರ ಶ್ರೀಮದ್‌ಗಾಂಭೀರ್ಯ ತಡೆಗಟ್ಟಿ ನಿಲ್ಲಿಸುವುದು. ಆದುದರಿಂದಲೆ ಮಾನವ ಸ್ವಭಾವದ ಮಾದರಿಗಳನ್ನು ಪರಿಪೋಷಿಸಿ ತೋರಿಸಬೇಕೆನ್ನುವವನು ಜನಸಾಮಾನ್ಯರ ಜೀವನವನ್ನೆ ಮೊದಲು ಅಭ್ಯಾಸಿಸಬೇಕಾಗುವುದು. ಅದಕ್ಕಾಗಿಯೆ ಇರಬಹುದು: ಮೂಲ ಇಂಗ್ಲಿಷ್ ಕತೆಗಾರನಾದ ಓ. ಹೆನ್ರಿಯು ತನ್ನ ಕಥಾವಸ್ತುಗಳನ್ನು ಹೆಚ್ಚಾಗಿ ಜನಸಾಮಾನ್ಯರ ಜೀವನದಿಂದಲೆ ಆಯ್ದುಕೊಂಡಿದ್ದಾನೆ; ಆ ಜನರನ್ನೆ ಕಥಾಪಾತ್ರಗಳನ್ನಾಗಿ

ರೂಪಿಸಿ ರಂಜಿಸಿದ್ದಾನೆ. ಶ್ರೀ ಬಿ. ಕೆ. ರಾಮಚಂದ್ರರಾಯರ ನಗೆಗಾರ-ಬಗೆಗಾರ ಸ್ವಭಾವಕ್ಕೆ ಓ. ಹೆನ್ರಿಯ ಸಾಹಿತ್ಯರೀತಿ ಮೆಚ್ಚಿಗೆಯದಾಗಿ ತೋರಿದ್ದರೆ ಆದರಲ್ಲಿ ಅಸ್ವಾಭಾವಿಕವೇನೂ ಎನಿಸುವಂತಿಲ್ಲ. ಎಂತಲೆ ಆತನ ಕೃತಿಗಳನ್ನಿವರು ಓದಿ ಜೀರ್ಣಿಸಿಕೊಂಡು, ಅದರ ಸತ್ತ್ವದಿಂದ ಕನ್ನಡ ಸಾಮಾನ್ಯರ ಸಹಜ ಜೀವನವನ್ನು ತಮ್ಮ ಕತೆಗಳಲ್ಲಿ ಚಿತ್ರಿಸಿ ತೋರಿಸಿದ್ದಾರೆ. ಇಲ್ಲಿ ಮೂಲಕತೆಗಳ ಭಾಷೆಯಷ್ಟೇ ಭಾಷಾಂತರಗೊಂಡಿಲ್ಲ; ಸನ್ನಿವೇಶಗಳೂ ಸಂದರ್ಭಗಳೂ ವ್ಯಕ್ತಿವ್ಯಕ್ತಿಗಳೂ ಭಾಷಾಂತರಗೊಂಡಿವೆ. ಆದುದರಿಂದಲೆ ಇಲ್ಲಿಯ ಕತೆಗಳೆಲ್ಲ ಒಳ್ಳೆಯ ಕನ್ನಡ ಕತೆಗಾರನೊಬ್ಬನ ಸ್ವತಂತ್ರ ಕತೆಗಳೆಂದು ಭಾಸವಾಗುವಂತಿವೆ.

ಈ ಸಂಗ್ರಹದಲ್ಲಿಯ ೧೦ ಕತೆಗಳಲ್ಲಿ ಒಂದೊಂದೂ ಒಂದೊಂದು ಬಗೆಯ ವಸ್ತುವೈಶಿಷ್ಟ್ಯದಿಂದಲೂ ತಂತ್ರವೈಚಿತ್ರ್ಯದಿಂದಲೂ ಕೂಡಿ ಇದೆ. ವಿಸ್ತೃತ ವಿಮರ್ಶೆಗೆ ಇದು ಉಚಿತ ಸ್ಥಳವಲ್ಲ. 'ಮಲ್ಲಯ್ಯನ ಪ್ರೇಮಚೂರ್ಣ'ದಲ್ಲಿಯ ವೈದ್ಯ ಮಲ್ಲಯ್ಯನ ಮುಗ್ಧತೆ, 'ಡೆಡೋನಿಯಾ' ಕತೆಯಲ್ಲಿಯ ಲಾಯರ್ ರಘುನಾಥರಾಯರ ಪುಸ್ತಕೀಯ ಜ್ಞಾನದ ಮರುಳು ಇವು ನಗದವರನ್ನೂ ನಗಿಸಬಲ್ಲುವು. 'ಜರತಾರಿ ಸೀರೆ'ಯ ಕಳ್ಳರಾಮ-ಚೆನ್ನಮ್ಮರೂ 'ಪ್ರೇಮೋಪಾಸಕರು' ಎಂಬುದರಲ್ಲಿಯ – ಸುಶಿಕ್ಷಿತರೂ ನಿರುದ್ಯೋಗಿಗಳೂ ಆದ ಕೃಷ್ಣಮೂರ್ತಿ – ಸುಧಾದೇವಿಯರೂ ತಂತಮ್ಮ ದಾಂಪತ್ಯ ಪ್ರೀತಿಯ ತ್ಯಾಗದ ಪಾಠದಿಂದ ವಿಷಮ ದಾಂಪತ್ಯವನ್ನು ಸಮಗೊಳಿಸಬಹುದು; ಸಮದಾಂಪತ್ಯದಲ್ಲಿ ಸೊಗಸನ್ನು ಹೆಚ್ಚಿಸಬಹುದು. 'ವಿಚಿತ್ರ ವ್ಯಥೆ'ಯಲ್ಲಿಯ ಚಂದಣ್ಣ - ಗಂಗೆಯರ ನೆಲ್ಲಿಕಾಯಿ ತಿಂದು ನೀರು ಕುಡಿದಂತಹ ಬದುಕೂ ಶಾಂತಪ್ಪ-ಸಿದ್ದವ್ವ ಅವರ ರುಚಿರಹಿತವಾದ ಸಪ್ಪೆಯಾದ ಬದುಕೂ ದಾಂಪತ್ಯ ಜೀವನದ ಒಂದೊಂದು ಸಜೀವ ಮಾದರಿಗಳಾಗಿವೆ. 'ಗಡಿಯಾರ' ಏಕನಾದದಂತಹ ದಾಂಪತ್ಯದಲ್ಲಿಯ ಬೇಸರವನ್ನು ರೂಪಿಸಿದರೆ, 'ಕೊರಚರ ಕೇರಿ'ಯಲ್ಲಿಯ ಮಾರ-ಮಾದಿಯರು ಜಗಳಾಟದ ಮುಳ್ಳುಬೇಲಿಯಲ್ಲಿ ಅಡಗಿಕೊಂಡು ಅರಳಿರುವ ಪ್ರೀತಿಪುಷ್ಪದ ಕಂಪನ್ನು ಹೊರಕ್ಕೆ ಹಾಕುವರು. ನಮ್ಮ ನಾಡಿನಲ್ಲಿಯ ಹಲವು ವೇಷದ ದೇಶಭಕ್ತರಂತೆ 'ಕನ್ನಡ ಪುತ್ರ' ಆಡಿಯೂ ಮಾಡದ ಅಧಮತೆಗೆ ಮಾದರಿಯಾಗಿದ್ದಾನೆ. 'ಬಯಸಿದ ಫಲ' ಬಡತನದ

ಕಷ್ಟ-ಕಾರ್ಪಣ್ಯಗಳನ್ನೂ ಸರಕಾರದ ನ್ಯಾಯದ ವೈಚಿತ್ರ್ಯವನ್ನೂ ವ್ಯಂಗ್ಯವಾಗಿ ಚಿತ್ರಿಸುತ್ತದೆ. 'ವಾಸನಾ'ದಲ್ಲಿಯ ಮನೋವಿಶ್ಲೇಷಣ, ಅತೀಂದ್ರಿಯ ವಾಸನೆ, ಬಸವಿಯ ಪರಿಮಳಜೀವನವೂ 'ಸೂರ್ಯಕಾಂತಿ ಹೂ'ವಿನ ರೋಗಿಯ ಮನಸ್ಸೂ ಅದಕ್ಕೆ ಸಂಜೀವಿನಿಯಾದ ಅಜ್ಜಿಯ ಚಿತ್ರ, ಅದಕ್ಕೆ ಆದ ಆಹುತಿ ಮನಸ್ಸಿನ ಮಾರ್ದವವನ್ನು ಚೆನ್ನಾಗಿ ಚಿತ್ರಿಸುತ್ತವೆ. ಇವೆರಡೂ ಕತೆ ಓ. ಹೆನ್ರಿಯ ಉತ್ತಮ ಕತೆಗಳಿದ್ದಂತೆ ಈ ಅನುವಾದದಲ್ಲೂ ಉತ್ತಮವಾಗಿವೆ. ಎಲ್ಲ ಕತೆಗಳಿಗೂ ವಿರೋಧಾಭಾಸವು ಮುಖ್ಯ ಜೀವಾಳವಾಗಿದೆ; ವ್ಯಂಗ್ಯವೂ ಇದೆ. ಆದುದರಿಂದ ನಗೆಹೂವನ್ನು ಅರಳಿಸಲಾರದ ಕತೆ ಯಾವುದೂ ಇಲ್ಲವೆಂದು ಹೇಳಬಹುದು.

'ಪರಭಾಷೆಯ ಕೃತಿಗಳ ಅನುವಾದ ಹೇಗೆ ಇರಬೇಕು?' ಎಂದು ಕೆಲವರು ಪ್ರಶ್ನೆಯನ್ನು ಎತ್ತಬಹುದು ಈ 'ಅನುವಾದಿತ ಕತೆ'ಗಳ ವಿಚಾರದಲ್ಲಿ. ಅನುವಾದಗಳ ಬಗೆಗೆ ಇಂತಹ ಪ್ರಶ್ನೆ ಯಾವಾಗಲೂ ಇದ್ದೇ ಇರುವುದು. ಆದುದರಿಂದಲೆ ಅನುವಾದ, ಭಾಷಾಂತರ ಹೇಗಿರಬೇಕೆಂಬುವು ಇನ್ನೂ ಸಮಸ್ಯೆಯಾಗಿ ಉಳಿದುಕೊಂಡಿವೆ. ಇದ್ದುದಿದ್ದಂತೆ ಭಾಷಾಂತರಿಸಿದರೆ ವಿದೇಶೀಯವಾಗಿ ವಿಚಿ[illegible] ಕಂಡು ರಸಗ್ರಹಣಕ್ಕೆ ಅನನುಕೂಲವಾಗುವುದು; ರಸಗ[illegible] ಅನುವಾದವಾದರೆ ಮೂಲ ಲೇಖಕನ [illegible]. ಆ ವಿಷಯ [illegible] ಕನ್ನಡ ದುದೆ ಎನಿಸುವ [illegible]. ಮೂಲ ಕತೆಗಾರ ಈ [illegible] ಓದುಗರು ಮೆಚ್ಚುವಂತಾಗಿವೆ, [illegible]. ಇವರ [illegible] ಕತೆಗಳೂ ಒಟ್ಟಾಗಿ [illegible].

'ಜಯಂತಿ' ಕಾರ್ಯಾಲಯ,
ಧಾರವಾಡ
ತಾ॥ ೧೮-೮-೪೫.

ಬೆಟಗೇರಿ ಕೃಷ್ಣಶರ್ಮ.

# ಹೂ - ನಾರು

'ಓ. ಹೆನ್ರಿ'ಯವರ ಕಥಾಕುಸುಮ ಮಾಲಿಕೆಯಾಗಿ ಅರ್ಪಿಸಬೇಕೆಂದು ಹೊರಟ ಈ ಹೆಣಿಕೆಯಲ್ಲಿ, [illegible] ಸ್ವತಂತ್ರ ಕತೆಯಾದ 'ಡಿಯೋನಿಸಿಯಾ' [illegible] ಬಿಟ್ಟಿದೆ. ಹೂವಿನೊಡನೆ ನಾರು [illegible] ಕಥಾಕುಸುಮಗಳೊಡನೆ [illegible] ಸ್ಥಳ ಸಿಕ್ಕಿಬಿಟ್ಟಿದೆ. ಅಂತು [illegible] ಇದನ್ನು ತಿಳಿದು [illegible] ಸ್ವೀಕರಿಸಬೇಕಾಗಿ ವಿನಂತಿ.

'ಓ. ಹೆನ್ರಿ'ಯವರು [illegible] ಸುಪ್ರಸಿದ್ಧ ಕತೆಗಾರರು. ಅವರ ನಿಜವಾದ ಹೆಸರು, William Sydney Porter. ೧೮೬೨ ರಿಂದ ೧೯೧೦ರ ವರೆಗೆ ಜೀವನಯಾತ್ರೆ ನಡೆಸಿದರು. ಕೆಲವು ಕಾಲ, ಹಣಕಾಸಿನ ಆಪಾದನೆಯ ಪರಿಣಾಮವಾಗಿ ಅವರಿಗೆ ಕಾರಾಗೃಹವಾಸವಾಯಿತು. ಆಗ ಹೊತ್ತು ಕಳೆಯುವ ಸಲುವಾಗಿ ಕತೆ ಬರೆಯಲು ಆರಂಭಿಸಿದರು. ಬಿಡುಗಡೆಯಾದ ಮೇಲೆ ಅವರ ಕತೆಗಳು ಜನಪ್ರಿಯವಾದವು. ಹೆಸರಾದ ಕತೆಗಾರರಾದರು. ನೂರಾರು ಕತೆಗಳನ್ನು ಬರೆದಿದ್ದಾರೆ. ಅಷ್ಟರಲ್ಲೂ ವೈವಿಧ್ಯತೆ ಇದೆ. ಲಲಿತಹಾಸ್ಯ, ಚತುರತೆ, ಮಾನವೀಯತೆಯ ಆಳವಾದ ಅರಿವು, ಜನತೆಯ ಮನೋವೃತ್ತಿಯ ವಿಷಯದಲ್ಲಿ ಇರುವ ವಿಶಾಲ ಪರಿಚಯ, ಇವುಗಳು ಅವರ ಕತೆಗಳ ಮುಖ್ಯ ಕತೆಗಳು. ಅವರ ಕಥಾನಿರೂಪಣೆಯಲ್ಲಿ ಒಂದು ವೈಶಿಷ್ಟ್ಯವಿದೆ. ಕಥಾವಸ್ತು ಬೆಳೆಯುತ್ತ ಹೋಗಿ, ಮುಂದೆ ಏನಾಗಬಹುದೆಂಬ ಸುಳಿವೇ ವಾಚಕರಿಗೆ ಸ್ವಲ್ಪವೂ ತೋರಿಬರದೆ, ಕಥಾ ಮುಕ್ತಾಯದಲ್ಲಿ ವಸ್ತು ಅರಳಿ, ಪರಿಮಳಿಸಿ, ಪಳಪಳಿಸಿ, ವಾಚಕರನ್ನು ವಿಸ್ಮಯಗೊಳಿಸಿ ಬಿಡುತ್ತದೆ. ಮೋಸಹೋದೆವು ಎಂದುಕೊಳ್ಳಬಹುದು ವಾಚಕರು, ವಿಸ್ಮಿತರಾದ ಮೇಲೆ. ಒಂದು ಕತೆಯಲ್ಲಿ ಈ ಅನುಭವವಾದ ಮೇಲೆ ಇನ್ನೊಂದು ಕತೆಯನ್ನು ಓದುವಾಗ ಎಷ್ಟೇ ಎಚ್ಚರ ಇಟ್ಟುಕೊಂಡು ಓದಿದರೂ ಸರಿ—ಮತ್ತೆ ಅದೇ ತಂತ್ರ... ಪ್ರತಿಯೊಂದು ಕತೆಯಲ್ಲೂ ಈ ವೈಶಿಷ್ಟ್ಯವಿದೆ. ಕತೆಯನ್ನು

ಮತ್ತೊಮ್ಮೆ ವಿಮರ್ಶಿಸಿ ಓದಿದರೆ ಮುಕ್ತಾಯವನ್ನು ನಿರೀಕ್ಷಿಸಬಹುದಾಗಿತ್ತು ಅನ್ನಿಸುತ್ತದೆ.

ಅನುವಾದವಾಗಿರುವ ಈ ಕತೆಗಳು ಎಷ್ಟರಮಟ್ಟಿಗೆ ಮೂಲವನ್ನು ಪ್ರತಿಬಿಂಬಿಸಿವೆಯೋ ನಾನರಿಯೆ. ಮೂಲವನ್ನೂ ಅನುವದಿತ ಕತೆಗಳನ್ನೂ ಓದಿದ ವಿಮರ್ಶಕರು ಹೇಳಬೇಕು. ಮೂಲ ಕಥಾವಸ್ತುವನ್ನು ಆಯ್ದು, ಅಲ್ಲಿಯ ಜನಜೀವನದ ಹೊರಮೈಯನ್ನು ಕಳಚಿ, ಕಥಾವಸ್ತುವನ್ನು ಕನ್ನಡ ಜನಜೀವನದಲ್ಲಿ ಬೆರೆಸಿ, ಬೆಳೆಸಿದ್ದೇನೆ. ಇದಕ್ಕಾಗಿ ಪಾತ್ರಗಳಲ್ಲಿ, ಕಥಾನಿರೂಪಣೆಯಲ್ಲಿ, ಇತರ ಸನ್ನಿವೇಶಗಳಲ್ಲಿ, ಅಗತ್ಯವಾದ ಮಾರ್ಪಾಡುಗಳನ್ನು ಮಾಡುವ ಸ್ವಾತಂತ್ರ್ಯವನ್ನು ತೆಗೆದುಕೊಂಡಿದ್ದೇನೆ.

ಈ ಕತೆಗಳಲ್ಲಿ ಕೆಲವು "ಪ್ರಜಾಮತ", "ಸತ್ಯವಾಣಿ", "ಜಯಂತಿ", "ಪ್ರಬುದ್ಧ ಕರ್ನಾಟಕ" ಇವುಗಳಲ್ಲಿ ಪ್ರಕಟವಾಗಿವೆ. ಇದಕ್ಕಾಗಿ ಆ ಆ ಪತ್ರಿಕೆಗಳ ಸಂಪಾದಕರಿಗೆ ವಂದನೆಗಳು.

ಈ ಕತೆಗಳನ್ನು ಮುದ್ರಿಸಿ ತಮ್ಮ ಮಾಲೆಯಲ್ಲಿ ಒಂದಾಗಿ ಸೇರಿಸಿಕೊಳ್ಳಲು ಒಪ್ಪಿದ್ದಕ್ಕಾಗಿ ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರಿಗೂ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ ಬೆಟಗೇರಿ ಕೃಷ್ಣಶರ್ಮರಿಗೂ ಅನಂತ ವಂದನೆಗಳು.

ಬಿ. ಕೆ. ರಾಮಚಂದ್ರರಾವ್,
ಚಿತ್ರದುರ್ಗ.

೪-೯-೧೯೫೩

—::—

ಮುದ್ರಕರು : ಟೌನ್ ಪ್ರೆಸ್, ಬೆಂಗಳೂರು ಸಿಟಿ.

# ಮಲ್ಲಯ್ಯನ ಪ್ರೇಮಪ್ರಕರಣ

ಆಯುರ್ವೇದ ಪಂಡಿತ ಮಲ್ಲಯ್ಯನ "ಗೌರೀಶಂಕರ ಔಷಧಾಲಯ" ಮಾರ್ಕೆಟ್ ರಸ್ತೆಯ ಐದನೆ ನಂಬರಿನ ಮನೆಯಲ್ಲಿ ಇದೆ. ಮಲ್ಲಯ್ಯನಿಗೆ ಸುಮಾರು ನಲವತ್ತು ವರ್ಷ ವಯಸ್ಸು; ಏಕಾಕಿ. ಔಷಧಾಲಯವೇ ಅವನ ಸಂಪೂರ್ಣ ಜಗತ್ತು. ಅಲ್ಲಿದ್ದ ಕೆಲವು ಔಷಧದ ಪೆಟ್ಟಿ, ಪಿತ್ರಾರ್ಜಿತವಾದ 'ಭಿಷಗ್ರತ್ನ' ಎಂಬ ಬಿರುದು, ಎರಡು ಸರ್ಜ್ ಅಂಗಿ, ಮೂಗಿನ ಮೇಲಿದ್ದ ಬೆಳ್ಳಿಯ ಕಟ್ಟಿನ ಕನ್ನಡಕ - ಇಷ್ಟೇ ಅವನ ಗಣ್ಯವಾದ ಆಸ್ತಿ. ಸುಮಾರು ಇಪ್ಪತ್ತು ವರ್ಷಗಳಿಂದ ಆಯುರ್ವೇದದ ಕೆಲಸ ಮಾಡುತ್ತಿದ್ದು, ಹಾಗೂ ಹೀಗೂ ಹೊಟ್ಟೆ ತುಂಬಿಸಿಕೊಳ್ಳುವಷ್ಟು ಸಂಪಾದಿಸುತ್ತಿದ್ದ. ನೆರೆಹೊರೆಯವರು ತಮಗೆ ಮತ್ತೇನೂ ಕೆಲಸವಿಲ್ಲದಿದ್ದಾಗ ಮಲ್ಲಯ್ಯನೊಡನೆ ಆಸಾಲೋಚನೆ ಮಾಡುವುದು, ಓದು ಬರೆಹ ಬಾರದವರು ಮಲ್ಲಯ್ಯನ ಸಹಾಯ ಕೋರುವುದು, ಅವನಿಂದ 'ಮದ್ದು ಪೆದ್ದು' ಆಗಾಗ ಇಸುಕೊಳ್ಳುವುದು, ತಮಗೆ ಕಾಸರೆ (ಜಡ್ಡು) ಯಾದಾಗ ಮಲ್ಲಯ್ಯ ಬಹು ಪಂಥಮಾಡಿ ಮುಫತ್ತಾಗಿ ಕೊಟ್ಟ ಪುಡಿಯನ್ನು ಗೋಪ್ಯವಾಗಿ ಚರಂಡಿಗೆ ಎಸೆದುಬಿಟ್ಟು, ಬೇರೆಯವರಲ್ಲಿ ಹಣ ಕೊಟ್ಟು ಔಷಧಿ ತರುವುದು - ಹೀಗೆ ಮಾಡುತ್ತಿದ್ದರು. ಇಷ್ಟೆಲ್ಲದರ ಅರ್ಥ ವೇನೆಂದರೆ, ಒಟ್ಟಿನಲ್ಲಿ ಮಲ್ಲಯ್ಯ ಒಳ್ಳೆಯ ಪ್ರಾಣಿ.

ಅದೇ ಬೀದಿಯ ಕಡೆಯ ಮನೆಯೇ - ಹೌದು, ನಲ್ಲಿಯ ಬಳಿ ಇರುವುದೇ - ರಾಜಪ್ಪನ 'ಭೋಜನಾಲಯ.' ಅಲ್ಲಿ ಯಾವಾಗಲೂ ಎಂಟು ಹತ್ತು ಜನ ಊಟದ ಗಿರಾಕಿಗಳು ಇದ್ದೇ ಇರುತ್ತಾರೆ. ಇದಕ್ಕೆ ಕಾರಣ ಸುಲಭ ದರವೂ ಅಲ್ಲ, ಊಟದ ರುಚಿಯೂ ಅಲ್ಲ; ರಾಜಪ್ಪನ ಮಗಳು - ವಿನಾ ಹ

ಯೋಗ್ಯಳಾದ ಕನ್ಯೆ, ಗೌರಮ್ಮ. ಗೌರಮ್ಮನನ್ನು ಲಗ್ನವಾಗಲು ಬಹಳ ಜನ ಯುವಕರು ಹಂಬಲಿಸುತ್ತಿದ್ದರೂ ಒಬ್ಬರೂ ಅವಳ ಹೃದಯವನ್ನು ಗೆದ್ದಿರಲಿಲ್ಲ. 'ಭಿಷಗ್ರತ್ನ' ಮಲ್ಲಯ್ಯ ಆಕೆಯನ್ನು ಚಿಕ್ಕಂದಿನಿಂದಲೂ ಎಂದರೆ ಹದಿನೇಳು ವರ್ಷಗಳಿಂದಲೂ ನೋಡುತ್ತಿದ್ದ. ಅವಳ ಸಂದರ್ಶನ ಅವನ ಹೃದಯವನ್ನು ಹೆಚ್ಚು ವೇಗದಿಂದ ಬಡಿದುಕೊಳ್ಳುವ ಹಾಗೆ ಎಂದೂ ಮಾಡಿರ ಲಿಲ್ಲ. ಆದರೆ ಈಗ ಒಂದು ವರ್ಷದ ಹಿಂದೆ ತನ್ನ ತಂದೆಗೆ ಔಷಧಿ ತೆಗೆದು ಕೊಂಡುಹೋಗಲು ಗೌರಮ್ಮ ಮಲ್ಲಯ್ಯನ ಔಷಧಾಲಯಕ್ಕೆ ಬಂದಾಗ, ಬಾಗಿಲ ಕಡೆ ಬೆನ್ನುಮಾಡಿ ನಿಂತಿದ್ದ ಮಲ್ಲಯ್ಯ ತನ್ನ ಎದುರಿಗಿದ್ದ ಮುಸುಕು ಕನ್ನಡಿ ಯಲ್ಲಿ ಅಕಸ್ಮಾತ್-ಅವಳ ಪ್ರತಿಬಿಂಬವನ್ನು ನೋಡಿ, ಅವಳ ನಿಲುವು, ಅವಳ ಸೌಂದರ್ಯ, ಅವಳ ರೂಪು, ಅವಳ ಮೈಕಟ್ಟು, ಸೆರಗು ಸರಿದಿದ್ದ ಅವಳ ಕಪ್ಪು ಕೂದಲು, ಹೊಳೆವ ಕಣ್ಣು ಇತ್ಯಾದಿ ಇತ್ಯಾದಿಗಳನ್ನು ಒಂದೊಂ ದಾಗಿ ಗುರುತಿಸಿ, ಅವುಗಳಿಗೆ ಸೆರೆಸಿಕ್ಕ. ಅನಂತರ ತನ್ನ ಕನ್ನಡಕವನ್ನು ತೆಗೆದು ಒರಸಿಕೊಂಡು ಪುನಃ ಅದನ್ನು ಕಣ್ಣಿಗೇರಿಸಿ, ಬಳಿಕ ಹಿಂತಿರುಗಿ ಗೌರಮ್ಮನನ್ನು ಎವೆ ಇಕ್ಕದೆ ನೋಡಲಾರಂಭಿಸಿದ. ತಾನು ಇದುವರೆಗೂ ಬ್ರಹ್ಮಚರ್ಯಾವಸ್ಥೆಯಲ್ಲಿದ್ದುದು ಅವನಿಗೆ ಕಠೋರವಾಗಿ ನೆನಪಿಗೆ ಬಂದು ಬಹಳ ಜಗುಪ್ಸೆಯೆನಿಸಿತು. ಆ ದಿನವೆ ಗೌರಮ್ಮನನ್ನು ಲಗ್ನವಾಗಬೇಕೆಂದು ಸಂಕಲ್ಪಮಾಡಿದ.

ಈ ಯೋಚನೆಯಲ್ಲಿಯೇ ಬಿದ್ದ ಮಲ್ಲಯ್ಯ, ತನ್ನ ನಡೆವಳಿಕೆಗೆ ಅಸಮಾ ಧಾನವನ್ನು ಸೂಚಿಸಿ ಗೌರಮ್ಮ ಹೊರಟು ಹೋದದ್ದನ್ನು ಗಮನಿಸಲೆ ಇಲ್ಲ. ತನ್ನ ಈ ಸಂಕಲ್ಪವನ್ನು ಯಾರ ಮುಂದೆಯೂ ಪ್ರಸ್ತಾಪಿಸುವಷ್ಟು ಧೈರ್ಯ ಆತನಿಗೆ ಇರಲಿಲ್ಲ. ಗೌರಮ್ಮನೊಡನೆ ಮಾತನಾಡುವ ದಿಟ್ಟತನವಿರಲಿಲ್ಲ. ಅಲ್ಲದೆ ಒಂದು ವಾರದ ಹಿಂದೆ ನಲ್ಲಿಯ ಬಳಿ ನೀರು ಹಿಡಿಯುತ್ತಾ ನಿಂತಿದ್ದ ಅವಳನ್ನು ಯಾರೋ ಕೆಣಕಿದ್ದಕ್ಕೆ, ಕೆಣಕಿದವನ ಕೆನ್ನೆಗೆ ಛಟೀರನೆ ಗೌರಮ್ಮ ಹೊಡೆದದ್ದನ್ನು ಮಲ್ಲಯ್ಯ ಸ್ವತಃ ಕಣ್ಣಾರೆ ನೋಡಿ ಮೂರ್ಛೆ ಬಂದು ಬೀಳು ವುದರಲ್ಲಿದ್ದ. ಆದ್ದರಿಂದ ಗೌರಮ್ಮನೊಡನೆ ಈ ವಿಷಯವನ್ನು ಪ್ರಸ್ತಾಪಿಸು ವುದು ಕ್ಷೇಮಕರವಲ್ಲವೆಂದು ಮಲ್ಲಯ್ಯನ ಮತವಾಯಿತು. ಕಡೆಗೆ ರಾಚಪ್ಪ

ನನ್ನು ಕೇಳಿಯೇ ಬಿಡಬೇಕೆಂದು ನಿಶ್ಚಯಮಾಡಿ 'ಇಂದು' 'ನಾಳೆ' ಎಂದು ದಿನಗಳನ್ನು ದಬ್ಬುತ್ತಾ ಆರು ತಿಂಗಳು ಕಳೆದಿದ್ದ.

* * * *

ಇನ್ನಾರದಿಲ್ಲದಿದ್ದರೂ, ಮಲ್ಲಯ್ಯನಿಗೆ ಬಿನ್ನಿ ಕಂಪೆನಿಯ ವೀರಣ್ಣನದು ತುಂಬಾ ಭಯ. ವೀರಣ್ಣ ಸುಮಾರು ಇಪ್ಪತ್ತೇಳು ವರ್ಷದ ವಯಸ್ಸಿನ ಯುವಕ. ಅದೇ ರಸ್ತೆಯಲ್ಲಿ ಒಂದು ಕೊಠಡಿಯನ್ನು ಬಾಡಿಗೆಗೆ ತೆಗೆದು ಕೊಂಡು ಅದರಲ್ಲಿ ವಾಸವಾಗಿದ್ದ. ಅವನಿಗೆ ತಿಂಗಳಿಗೆ ಹದಿನೈದು ರೂಪಾಯಿ ಸಂಬಳ ಬರುತ್ತಿತ್ತು. ಇನ್ನೇನು ಆಸ್ತಿಯೂ ಇರಲಿಲ್ಲ; ಹೆಚ್ಚಿಗೆ ಸಂಬಳ ಬರಬಹುದಾದ ಸಂಭವವೂ ಇರಲಿಲ್ಲ. ಒಬ್ಬೊಂಟಿಗ ; ಒಳ್ಳೆಯ ಹುಡುಗ. ರಾಚಪ್ಪನ ಭೋಜನಾಲಯದಲ್ಲಿಯೆ ಅವನ ಊಟ. ಹೂಂ, ನಿಜ ; ಗೌರ ಮ್ಮನ ಹೃದಯವನ್ನು ಗೆದ್ದಿದ್ದ ; ತನ್ನ ಹೃದಯವನ್ನೂ ಅವಳಿಗೆ ಸೋತಿದ್ದ. ಗೌರಮ್ಮನನ್ನು ವೀರಣ್ಣನಿಗೆ ಕೊಡುವುದಕ್ಕೆ ರಾಚಪ್ಪನಿಗೆ ಸ್ವಲ್ಪವೂ ಇಷ್ಟ ವಿರಲಿಲ್ಲ. ವೀರಣ್ಣ ಬಡವನೆಂದೂ ಅವನಿಗೆ ಬರುವ ಸಂಬಳದಲ್ಲಿ ಗೌರಮ್ಮ ಸೌಖ್ಯವಾಗಿ ಬಾಳಲಾರಳೆಂದೂ ಅನುಕೂಲಸ್ಥರಿಗೆ ಅವಳನ್ನು ಲಗ್ನಮಾಡಿ ಕೊಡಬೇಕೆಂದೂ ರಾಚಪ್ಪನ ಇಷ್ಟ. ಗೌರಮ್ಮನನ್ನು ವೀರಣ್ಣ ಪ್ರೀತಿಸುವುದು ರಾಚಪ್ಪನಿಗೆ ಗೊತ್ತಿತ್ತು. 'ಭೋಜನಾಲಯಕ್ಕೆ ಒಬ್ಬ ಗಿರಾಕಿ ಕಡಿಮೆಯಾಗುತ್ತಾನಲ್ಲ!' ಎಂಬ ಯೋಚನೆ ಇಲ್ಲದಿದ್ದರೆ, ವೀರಣ್ಣನನ್ನು ಅವನು ಮನೆಗೇ ಸೇರಿಸುತ್ತಿರಲಿಲ್ಲ. ವೀರಣ್ಣನೂ ಮಲ್ಲಯ್ಯನೂ ಪರಿಚಯ ಸ್ಥರು. ಊಟಕ್ಕೆ ಹೋಗುವಾಗಲೆಲ್ಲಾ ವೀರಣ್ಣ ಮಲ್ಲಯ್ಯನ ಔಷಧಾಲಯಕ್ಕೆ ಬಂದು, ಆ ಸುದ್ದಿ ಈ ಸುದ್ದಿ ಮಾತನಾಡಿ ಹೋಗುತ್ತಿದ್ದ.

* * * *

ಒಂದು ದಿನ ಸಾಯಂಕಾಲ ಏಳು ಗಂಟೆಯ ಸಮಯದಲ್ಲಿ ಮಲ್ಲಯ್ಯ ಮನೆಯ ಮೂಲೆಯ ಕಡೆಗೆ ತಿರುಗಿಕೊಂಡು ಮೂಲಿಕೆ ಅರೆಯುತ್ತಾ ಇದ್ದಾಗ ವೀರಣ್ಣ ಆಲೋಚನಾಪರನಾಗಿ, ನಿಧಾನವಾಗಿ ಬಂದ; ಅಲ್ಲಿದ್ದ ಸ್ಟೂಲಿನ ಮೇಲೆ ಕುಳಿತುಕೊಂಡು "ಮಲ್ಲಯ್ಯಾ! ನನಗೆ ಒಂದು ಔಷಧಿ ಬೇಕು, ಮಾಡಿ ಕೊಡ್ತೀಯಾ?" ಎಂದು ಮೆಲ್ಲನೆ ಕೇಳಿದ.

ಬಗ್ಗಿ ನಿಂತುಕೊಂಡು ನಿಲಿಸನಾಡುತ್ತಿದ್ದ ಮಲ್ಲಯ್ಯ ಹಿಂದಿರುಗಿ ಕೂಡ ನೋಡದೆಯೆ "ಪರಟು ಬಿಟ್ಟ್ಯಾ; ನನಗೆ ಗೊತ್ತು. ಭೈರಪ್ಪ ನಿನ್ನ ನಡುವನ್ನು ಮುರಿದಿದ್ದಾನೆ ಅಂತ. ಎಷ್ಟು ಸಲ ಹೇಳಲಿಲ್ಲ, ಆನೆ ಜತೆಗೆ ಕುಸ್ತಿ ಆಡ ಬೇಡ, ಅವನು ಭಂಡ ಆಪ್ಪಾನೆ, ಜಂ !" ಎಂದ.

ಮಲ್ಲಯ್ಯನ ಮಾತನ್ನು ಕಿವಿಗೆ ಹಾಕಿಕೊಳ್ಳದೆ ವೀರಣ್ಣ ಮೊದಲಿ ನಂತೆಯೇ ಮೆಲ್ಲನೆ "ಇಲ್ಲಿ ನೋಡು ಮಲ್ಲಯ್ಯ. ಇವತ್ತು ರಾತ್ರಿ ನಾನೂ ಗೌರೀ ಓಡಿಹೋಗಬೇಕೂ ಅಂತ ಮಾಡಿಬಿಟ್ಟಿದ್ದೇವೆ!" ಎಂದ.

ಛಂಗನೆ ಹಿಂದಿರುಗಿ ಮಲ್ಲಯ್ಯ ಹಾಗೆಯೇ ಬಗ್ಗಿ ನಿಂತುಕೊಂಡು ವೀರಣ್ಣನ ಮುಖವನ್ನು ನೋಡತೊಡಗಿದ. ಈ ತೆರನ ಶಬ್ದಗಳನ್ನು ಅವನು ಕೇಳಿಯೇ ಇರಲಿಲ್ಲ. ಒಂದು ದಿವಸ [illegible] ಗೌರಮ್ಮನನ್ನು ತಾನು ಲಗ್ನವಾಗಬೇಕೆಂದು ನಿರ್ಧರಿಸಿದ್ದರೂ ಪ್ರಸ್ತಾಪ ಪ್ರಾರಂಭದ ಮಾರ್ಗವೇ ದೊರೆಯದೆ ಅವನು ಒದ್ದಾಡುತ್ತಿದ್ದಾಗ, ಎರಡು ತಿಂಗಳ ಹಿಂದೆ ಬಂದು ಆ ಊರಲ್ಲಿ ನೆಲೆಸಿದ್ದ ವೀರಣ್ಣ ಗೌರಮ್ಮನೊಡನೆ ಅನುಸಂಧಾನ ಮಾಡಿ ಕೊಂಡದ್ದನ್ನು ಕೇಳಿ ಅವನಿಗೆ ಸಿಡಿಲು ಬಡಿದ ಹಾಗಾಗಿತ್ತು. ಸ್ವಲ್ಪ ಹೊತ್ತು ಹಾಗೆಯೇ ವೀರಣ್ಣನನ್ನು ನೋಡಿ [illegible]ಸಿದನು.

ಮಲ್ಲಯ್ಯನ ವಿಕಾರಗಳನ್ನು ವೀರಣ್ಣ ಗಮನಿಸಲೇ ಇಲ್ಲ. ಕಿಟಕಿಯಲ್ಲಿ ಕಾಣುತ್ತಿದ್ದ ದೂರದ ತೆಂಗಿನ [illegible]ಯನ್ನು ನೋಡುತ್ತಾ ಯೋಚನಾಕ್ರಾಂತನಾಗಿದ್ದ. ಆದರ ಪರಿಣಾಮವಾಗಿಯೋ ಎಂಬಂತೆ ಮುಂದೆ ಹೇಳಿದ: "ಯೋಗ ಬೇಕೆಂದು ಮಾಡಿದ್ದೇವೆ—ಇದೂ ಅವಳು ಕತ್ತೆಯುವರೆಗೂ ಕೈಕೊಡದೆ ಇದ್ದರೆ! ಈಗ ಒಂದು ತಿಂಗಳಿಂದ ಮಸಲತ್ತು ಮಾಡ್ತಾ ಇದ್ದೀನಿ. ಒಂದು ಸಲ ಬರ್ತೀನಿ ಅಂತಾಳೆ; ಇನ್ನೊಂದು ಸಲ ಊಹೂಂ ಅಂತಾಳೆ. ಈಗ ಎರಡು ದಿವಸಗಳಿಂದ ಖಂಡಿತ ಬರ್ತೀನಿ ಅಂತಿದಾಳೆ. ಆದ್ದರಿಂದ ಇವತ್ತು ರಾತ್ರಿ ಹೊರಟು ಹೋಗೋಣ್ವಾಂತ ಇದ್ದೀವಿ. ಈಗಾಗಲೇ ಏಳು ಗಂಟೆ ಆಗಿದೆ. ಹನ್ನೆರಡಕ್ಕೆ ನಾವು ಹೋಗೋದು. ಅಷ್ಟರಲ್ಲಿ ಅವಳ ಬುದ್ಧಿ ಏನಾಗುತ್ತೋ, ಹೆಂಗಸಿನ ಚಿತ್ತ!"

"ನಿನಗೆ ಔಷಧಿ ಬೇಕು ಎಂದು ಹೇಳಿದೆನಲ್ಲಯ್ಯ!" ಮಲ್ಲಯ್ಯ ಬಿರುಸಾಗಿಯೇ ಮಾತನಾಡಿದ. ಕಣ್ಣುಗಳಲ್ಲಿ ಉರಿ ಕಾಣುತ್ತಿತ್ತು.

ವೀರಣ್ಣನಿಗೆ ಮಲ್ಲಯ್ಯನ ಮಾತು ಮನ ಮುಟ್ಟಲಿಲ್ಲ. ಆದುದರಿಂದಲೆ ಮುಂದುವರಿಸಿದ: "ಈ ರಾತ್ರಿ ಹೊರಟು ಹೋಗುತ್ತೇನೆ ಎಂತ ನಿಶ್ಚಯಿಸಿದ್ದರಿಂದ, ಇಲ್ಲಿಗೆ ಎಂಟು ಮೈಲಿ ಆಗುತ್ತಲ್ಲ- ಹೊನ್ನೇನಹಳ್ಳಿ, ಅಲ್ಲಿಗೆ ಬೆಳಗ್ಗೆ ಹೋಗಿ ಅಯ್ಯನವರಿಗೆ ಹೇಳಿ ಬಂದಿದ್ದೇನೆ. ಹೇಗಿದ್ದರೂ ಅನೇಕ ಮದುವೆ ನಡೀತಾ ಇರುತ್ತವೆ ಅಲ್ಲಿ! ಅವರ ಮನೆಯಲ್ಲೇ ಹಬ್ಬದ ಊಟಕ್ಕೂ ಏರ್ಪಾಡು ಮಾಡಿದ್ದೇನೆ. 'ನಾವಿಬ್ಬರೇ ಬರ್ತೀವಿ. ಇಬ್ಬರಿಗೂ ಯಾರೂ ನೆಂಟರಿಲ್ಲ' ಎಂದು ಹೇಳಿದ್ದೇನೆ. ನಾಳೆ ಬೆಳಗ್ಗೆ ಆರು ಗಂಟೆಗೆ ಲಗ್ನದ ಮುಹೂರ್ತ. ಇಷ್ಟೆಲ್ಲಾ ಏರ್ಪಾಡಾಗಿ ಹೋದಮೇಲೆ ಹೊತ್ತಿಗೆ ಗೌರಿ ಏನು ರಾಗ ಹಾಡುತ್ತಾಳೋ ಅಂತ!'

"ಇಲ್ಲಿ ನೋಡು ವೀರಣ್ಣಾ! ಇದೆಲ್ಲಾ ನನಗೆ ಬೇಕಿಲ್ಲ. ನಿನಗೆ ಯಾವ ಕಾಯಿಲೆಗೆ ಔಷಧ ಬೇಕೋ ನನಗೆ ತಿಳಿಯುವುದೇ ಇಲ್ಲ!"

ಮಲ್ಲಯ್ಯನ ಮಾತು ವೀರಣ್ಣನ ಮೇಲೆ ಏನೂ ಪರಿಣಾಮವನ್ನುಂಟು ಮಾಡಲಿಲ್ಲ. ಅವನು ಅಪ್ರಸನ್ನನಾಗಿ ಗುರುಗುಟ್ಟಿದ. "ಗೌರೀನ ನನಗೆ ಲಗ್ನಮಾಡಿಕೊಡುವುದಕ್ಕೆ ರಾಜಪ್ಪನಿಗೆ ಇಷ್ಟವಿಲ್ಲ. ಗೌರಿಯು ಅವನನ್ನು ಎಲ್ಲಿ ತಿರುಗಿಸುತ್ತಾಳೋ ಎಂದು ಭಯ!"

"ಇಲ್ಲಿ ಕೇಳಯ್ಯಾ ವೀರಣ್ಣಾ! ನಿನ್ನ ಔಷಧಿ ನನಗೆ ಬೇಕಿಲ್ಲ. ನಾನು ಬೇರೆ ಒಬ್ಬನಿಗಾಗಿ ಮುಖಾಮುಖಿ ಮಾಡುತ್ತಿದ್ದೇನೆ. ನಿನಗೆ ಏನು ಬೇಕೋ ಹೇಳು, ಇಲ್ಲದಿದ್ದರೆ ಗಾಡೀ ಬಿಡು!"

ಇದ್ದಕಿದ್ದ ಹಾಗೇ ತನ್ನ ಧ್ವನಿಯನ್ನೂ ಹೇಳುತ್ತಿದ್ದ ವಿಷಯವನ್ನೂ ಬದಲಾಯಿಸಿ ವೀರಣ್ಣ ಆತ್ಮೀಯತೆಯಿಂದ ಮಲ್ಲಯ್ಯನನ್ನು ನೋಡುತ್ತಾ "ಮಲ್ಲಯ್ಯಪ್ಪ ಮಲ್ಲಯ್ಯಪ್ಪ, ಗೌರಿ ನನ್ನ ಮೇಲೆ ಪ್ರೀತಿಸುವ ಹಾಗೆ ಏನಾದರೂ ಮಾಡಿಕೊಡುತ್ತೀಯಾ!" ಎಂದು ಮಲ್ಲಯ್ಯನಿಗೆ ಎರಡನೆಯ ಸಿಡಿಲನ್ನು ಹೊಡೆದ.

ಮಲ್ಲಯ್ಯನಿಗೆ ದಿಗ್ಭ್ರಮೆಯಾಯಿತು. ತಲೆ ಸುತ್ತಿಕೊಂಡು

ಬಂದಂತೇ ಆಯಿತು. ಎರಡು ನಿಮಿಷಗಳ ಕಾಲ ತಲೆ ಎತ್ತಿ ಏನನ್ನೋ ಯೋಚನೆ ಮಾಡಲಾರಂಭಿಸಿದ. ತನ್ನ ವಿಚಾರಗಳಲ್ಲಿಯೆ ಮಗ್ನನಾಗಿದ್ದ ವೀರಣ್ಣ ಮುಂದೆ ಹೇಳಿದ: "ನಮ್ಮ ಅಕ್ಕಿಮಂಡಿ ರುದ್ರಣ್ಣ ಆ ತರದ ಮದ್ದು ಒಂದು ಮಾಡಿಸಿಕೊಂಡಿದ್ದನಂತೆ! ಅವನ ಹುಡುಗಿ, ಮುಂಚೆ ಅವನನ್ನು ಕಂಡರೆ ಉರಿದು ಬೀಳುತ್ತಿದ್ದವಳು, ಅವನು ಉಪಾಯಮಾಡಿ ಅವಳಿಗೆ ಮದ್ದು ತಿನ್ನಿಸಿದ ಮೇಲೆ ಅವನನ್ನು ಕಂಡರೆ ಅವಳಿಗೆ ಪ್ರಾಣ. ಮೂರೇ ದಿನದ ಮೇಲೆ ಅವರ ಲಗ್ನಾನೂ ಅಂಥಾದ್ದು ಏನಾದರೂ ಮಾಡಿ ಕೊಡು ಮಲ್ಲಯ್ಯ!"

ವೀರಣ್ಣ ವಾಸ್ತವವಾಗಿ ಒಳ್ಳೆಯ ಹುಡುಗ. ಗೌರಮ್ಮನ ಪ್ರೇಮವನ್ನು ಮೋಸದಿಂದ ಸಂಪಾದಿಸುವ ಇಷ್ಟವಿರಲಿಲ್ಲ. ಸಮಯದಲ್ಲಿ ಅವಳು ಹಿಂದೆಗೆದು, ತಾನು ಮಾಡಿದ ಏರ್ಪಾಟುಗಳನ್ನು ಹಾಳುಮಾಡದಂತೆ ಹುಷಾರಾಗಿರಬೇಕೆಂದು ಅವನ ಆಶೆ. "ಅಷ್ಟೆ! ಇನ್ನೇನಿಲ್ಲ ಮಲ್ಲಯ್ಯ, ಅಂಥಾದ್ದೊಂದು ಏನಾದರೂ ಮಾಡಿಕೊಟ್ರೆ ಈಗ ಊಟಕ್ಕೆ ಹೋಗುವಾಗ ಅವಳಿಗೆ ತಿನ್ನಿಸಿ ಬಿಡುತ್ತೇನೆ. ಸ್ವಲ್ಪ ಸೀ ಆಗಿರಲಿ! ಹೋಟಲ್ ತಿಂಡಿಯ ಜತೆಗೆ ಸೇರಿಸಿಬಿಟ್ಟು ಕೊಡುತ್ತೇನೆ. ಅಥವಾ ಹೊಸತರದ ಗುಲ್‌ಖಿನ್ ಬಂದದೆ.... ಎಂತ ಕೊಡುತ್ತೇನೆ. ಅವಳು ತಿಂದರೆ, ರಾತ್ರಿ ಹನ್ನೆರಡು ಗಂಟೆ ಹೊತ್ತಿಗೆ ಅವಳಿಗೆ ನನ್ನ ಮೇಲೆ ಪ್ರೇಮ ಹೆಚ್ಚಾಗಿ ನನ್ನ ಜತೇಲಿ ಬಂದೇ ಬರುತ್ತಾಳೆ. ಐದು ಗಂಟೆಕಾಲ ಅವರೂ ಪ್ರೇಮ ಹೆಚ್ಚಾಗುವಂತೆ ಮದ್ದು ಕೊಡು ಮಲ್ಲಯ! ಶಿವನಾಣೆ, ಯಾರಿಗೂ ಹೇಳೋದಿಲ್ಲ!"

ಮಲ್ಲಯ್ಯ ತನ್ನ ಯೋಚನೆಯೆಲ್ಲಾ ಮುಗಿಸಿ ಕಾರ್ಯಕ್ರಮವನ್ನು ನಿರ್ಧರಿಸಿ ಬಿಟ್ಟಿದ್ದ. "ನೀವು ಓಡಿಹೋಗುವುದು ಎಷ್ಟು ಹೊತ್ತಿಗೆ?" ಎಂದು ಕೇಳಿದ.

"ಹನ್ನೆರಡು ಗಂಟೆಗೆ! ಈಗ ಊಟಕ್ಕೆ ಹೋಗುತ್ತೇನೆ. ಒಂಬತ್ತು ಗಂಟೆಯ ಹೊತ್ತಿಗೆ ಮಾಮೂಲಿನಂತೆ ರಾಚಪ್ಪ ಮಲಗಿ ಬಿಡುತ್ತಾನೆ. ನಮ್ಮ ಏರ್ಪಾಡಿನ ಪ್ರಕಾರ ಗೌರಿ ಹನ್ನೆರಡರ ವರೆಗೂ ಎದ್ದೇ ಇರಬೇಕು. ನಾನು ಅವರ ಮನೆಯ ಹಿತ್ತಲ ಕಡೆಗೆ ಹೋಗಿ ಎರಡು ಸಾರಿ ಸಿಳ್ಳುಹಾಕಿ ಮೂರು

ಸಾರಿ ಹಿತ್ತಲು ಬಾಗಿಲು ತಟ್ಟಬೇಕು! ಗೌರಿ ಬಾಗಿಲು ತೆಗೆದು ಬಂದಳೋ ನನ್ನ ಹೆಂಡತಿ ಆದಳು ಅಂತ ಇಟ್ಕೊ! ಬರ್ಲಿಲ್ಲೋ, ನನ್ನ ಕಥೆ ಮುಗೀತು!"

"ವೀರಣ್ಣಾ, ನಾನು ಒಂದು ಗುಳಿಗೆ ಗಾತ್ರ ಒಂದು ಚೂರ್ಣಮಾಡಿ ಕೊಡುತ್ತೇನೆ .... ಏನೋ ಹೋಗ್ಲೀ ಅಂತ! ಈ ತರದ ಔಷಧಿ ನಾನು ಯಾರಿಗೂ ಮಾಡಿ ಕೊಡುವವನಲ್ಲ; ಯಾಕೇ ಎಂದರೆ .... ನೋಡು .... ಎಷ್ಟು ಅನಾಹುತ ಆಗುತ್ತೆ ಅದಕ್ಕೇ. ನೀನು ಖಾತ್ರಿ ಆಸಾಮಿ, ಪಕ್ಕದ ಮನೆ ಯುವನ ಹೆಂಡತಿಗೆ ಕೊಡುವಂತಾವನು ನೀನಲ್ಲಾ ಅಂತ ಕೊಡ್ತೀನಿ. ಈ ಪ್ರೇಮಚೂರ್ಣ ಇಲ್ಲಿ ಸಿಗುತ್ತೇ ಅಂತ ಸುಳುವು ಗೊತ್ತಾದರೆ ಪ್ರಪಂಚದ ಗಂಡಸರೆಲ್ಲಾ ಇಲ್ಲೇ ಬರುತಾರೆ ನೋಡು!"

"ಯಾರಿಗೂ ಹೇಳೋದಿಲ್ಲ ಮಲ್ಲಯ್ಯ; ಎದೆ ಸೀಳಿದ್ರೂ ಹೇಳೋದಿಲ್ಲ!"

ಮಲ್ಲಯ್ಯ ಮನಸ್ಸಿನಲ್ಲೇ ನಗುತ್ತಾ ಸ್ವಲ್ಪ ಅಫೀಮು ತೆಗೆದುಕೊಂಡು ಅದಕ್ಕೆ ಗಾಢನಿದ್ರೆ ಬರುವ ಕೆಲವು ರಸಗಳನ್ನು ಸೇರಿಸಿ, ಜೇನುತುಪ್ಪ-ಸಕ್ಕರೆ ಯಲ್ಲಿ ಕಲಸಿ, ಒಂದು ಗಜ್ಜುಗದ ಪ್ರಮಾಣ ಗುಳಿಗೆಮಾಡಿ, ಅದನ್ನು ವೀರ ಣ್ಣನ ಕೈಗೆ ಕೊಟ್ಟು "ನೋಡು ವೀರಣ್ಣ, ಈ ಚೂರ್ಣಾನ ನೀನೇ ಖುದ್ದು ಗೌರಮ್ಮನಿಗೆ ತಿನ್ನಿಸಿ ಬರಬೇಕು. ಯಾರ ಕೈಲಾದರೂ ಕಳುಹಿಸಿದರೆ ಇನ್ನಾ ರಾದರೂ ತಿಂದು ಏನಾದರೂ ಆದೀತು" ಎಂದು ಎಚ್ಚರಿಕೆಯನ್ನೂ ಕೊಟ್ಟ. ತಿಂದವರಿಗೆ ಅರ್ಧಗಂಟೆಯಲ್ಲಿಯೆ ಗಾಢನಿದ್ರೆ ಬಂದು ಐದಾರು ಗಂಟೆ ಕಾಲ ಅವರು ಕುಂಭಕರ್ಣನೋಪಾದಿಯಲ್ಲಿ ಮಲಗುವುದರಲ್ಲಿ ಸಂದೇಹವೇ ಇರಲಿಲ್ಲ!

ವೀರಣ್ಣ ಹೊರಟು ಹೋದಮೇಲೆ ಮಲ್ಲಯ್ಯ ಸುಮಾರು ಒಂದು ಗಂಟೆಯ ಕಾಲ ಕಾದಿದ್ದ. ವೀರಣ್ಣ ಊಟ ಮುಗಿಸಿಕೊಂಡು ಕೊಠಡಿಗೆ ಹೋದುದನ್ನು ಗಮನಿಸಿದನಂತರ, ರಾಚಪ್ಪನಿಗೆ ಒಂದು ಕಾಗದ ಬರೆದು, ಎದುರು ಅಂಗಡಿ ಜಗುಲಿಯ ಮುಂದೆ ಕುಳಿತಿದ್ದ ಅಂಗಡಿಯ ಜವಾನ ನೊಂದಿಗೆ ಕಳುಹಿಸಿದ. ಆ ಕಾಗದದಲ್ಲಿ ಈ ರೀತಿ ಬರೆದಿತ್ತು:

"ರಾಜಯ್ಯನವರಿಗೆ ಮಲ್ಲಯ್ಯನ ಶರಣಾರ್ತಿಗಳು— ಈ ದಿವಸ ರಾತ್ರಿ ಹನ್ನೆರಡು ಘಂಟೆಗೆ ವೀರಣ್ಣ ಗೌರಮ್ಮನನ್ನು ಓಡಿಸಿಕೊಂಡು ಹೋಗುವ ಉದ್ದೇಶದಿಂದ ಹಿತ್ತಿಲು ಬಾಗಿಲ ಕಡೆಗೆ ಬಂದು ಎರಡು ಸಲ ಸಿಳ್ಳು ಹಾಕಿ ಮೂರು ಸಲ ಬಾಗಿಲು ತಟ್ಟುತ್ತಾನೆ. ನಿಮಗೆ ತಿಳಿಸುತ್ತೇನೆ. [illegible] ಬಿಡಿ."

ಸ್ವಲ್ಪ ಹೊತ್ತಿನಲ್ಲೇ ಉತ್ತರ ಬಂತು:

"ಮಲ್ಲಯ್ಯನವರಿಗೆ, ರಾಜಯ್ಯನ ಶರಣಾರ್ತಿಗಳು. ವರ್ತಮಾನ ಕಳುಹಿಸಿದ್ದಕ್ಕೆ ಸಂತೋಷವಾಯಿತು. ನನಗೆ ತಲೆನೋವು ಬಹಳ ಬಂದಿದೆ. ಆದರೂ ನಾನು ಎಚ್ಚರವಾಗಿದ್ದು ಅವನು ಬಂದೊಡನೆ ಮೆಟ್ಟಿನಿಂದ ನೋಡಿಕೊಳ್ಳುತ್ತೇನೆ."

ಆ ದಿವಸ ಮಧ್ಯರಾತ್ರಿಯಲ್ಲಿ ದೊಡ್ಡ ಅನಾಹುತವಾಗುವುದೆಂದು ನಿರೀಕ್ಷಿಸಿ ಮಲ್ಲಯ್ಯ ನಿದ್ದೆ ಮಾಡಿದ.

ಬೆಳಗಾಯ್ತು. ಮಲ್ಲಯ್ಯನಿಗೆ ಏನೂ ವರ್ತಮಾನ ಬರಲಿಲ್ಲ. ಪೆಟ್ಟು ತಿಂದ ವೀರಣ್ಣ ಮುಲಾಮಿಗೂ ಬರಲಿಲ್ಲ. ಮಧ್ಯರಾತ್ರಿ ಗಲಾಟೆ ನಡೆಯಿತೆಂದು ಯಾರೂ ತಿಳಿಸಲಿಲ್ಲ. ಮಧ್ಯಾಹ್ನ ಹನ್ನೆರಡರ ವರೆಗೂ ಮಲ್ಲಯ್ಯ ಕುತೂಹಲದಿಂದ ವರ್ತಮಾನವನ್ನು ಎದುರು ನೋಡುತ್ತಿದ್ದ; ಏನೂ ವರ್ತಮಾನ ಬರಲಿಲ್ಲ. ಮಲ್ಲಯ್ಯನಿಗೆ [illegible]ಗದಾಯ್ತು; ತಾನೇ ಭೋಜನಾಲಯಕ್ಕೆ ಹೋಗಿ ಬರಬೇಕೆಂದು ಹೊರಗೆ ಬಂದು ಬಾಗಿಲನ್ನು ಇಕ್ಕಿ ಬೀಗ ಹಾಕುತ್ತಿದ್ದ. ಅಷ್ಟರಲ್ಲಿ ವೀರಣ್ಣ ಜುಟ್ಟಿಗೆ ಮಲ್ಲಿಗೆ ಹೂವನ್ನೂ ಗಮಗಮಿಸುವ ಹೊಸ ಬಟ್ಟೆಗಳನ್ನೂ ಹಾಕಿಕೊಂಡು ಬಂದು ಮಲ್ಲಯ್ಯನ ಬೆನ್ನು ತಟ್ಟಿ ಸಂತಸದಿಂದ "ರಾತ್ರಿ ರಾಜಪ್ಪನ ಮನೆಗೆ ಊಟಕ್ಕೆ ಬರಬೇಕಪ್ಪ, ರಾಜಪ್ಪ ಹೇಳು ಅಂದ. ಮಲ್ಲಪ್ಪಾ, ನಿನ್ನ ದಯದಿಂದ ನನ್ನ ಲಗ್ನ ಆಯ್ತು. ರಾಜಪ್ಪನೂ ನನ್ನ ಮಾಫ್ ಮಾಡಿದ ನೋಡು. ನಿನ್ನೆ ರಾತ್ರಿ ನಿನ್ನ ಮುಂದೆ ಹೇಳಿದ ಹಾಗೆ ಹಿತ್ತಿಲ ಬಾಗಿಲ ಹತ್ತಿರ ಹೋಗಿ ಸಂಕೇತ ಮಾಡಿದೆ. ಪಂಜರದೊಳಗಿಂದ ಗಿಣಿ ಹಾರಿ ಬರೋ ಹಾಗೆ ಬಂದಳು ಗೌರಿ. ಕೂಡಲೆ, ಮೊದಲೆ ಗೊತ್ತು ಮಾಡಿದ್ದ ಗಾಡೀಲಿ ಸ್ಟೇಷನ್ನಿಗೆ ಹೋಗಿ ರೈಲು ಹತ್ತಿಕೊಂಡು ಹೊನ್ನೇ

ಮತಕ್ಕೆ ಹೋದೆವು. ಇವತ್ತು ಬೆಳಿಗ್ಗೆ ಆರು ಗಂಟೆಗೆ ಲಗ್ನಾನೂ ಆಯ್ತು. ‘ರಾಜಪ್ಪ ಹೇಗಿದ್ರೂ ಕ್ಷಮಿಸುತ್ತಾನೆ, ಇನ್ನೇನಂತೆ’ ಎಂತ ಒಂಭತ್ತು ಗಂಟೆಗೆ ಹಿಂದಿರುಗಿ ಬಂದೆವು. ನನ್ನ ದಯಾಳುವಾದ ನನ್ನ ಮಾವ ನಮ್ಮಿಬ್ಬರಿಗೂ ಆಶೀರ್ವಾದ ಮಾಡಿದ. ಇವತ್ತು ಮಧ್ಯಾಹ್ನ ನಾಲ್ಕು ಗಂಟೆಗೆ ಗೌರಿ ನನ್ನ ಮನೆಗೆ ಗಂಗೆ ತರುತ್ತಾಳೆ. ನೀನೂ ಬಾ, ರಾತ್ರಿ ರಾಜಪ್ಪನ ಮನೆಯೊಳಗೆ ಹಬ್ಬದೂಟ!” ಎಂದ.

ಮಲ್ಲಯ್ಯ ಭ್ರಾಂತನಾಗಿ
“ಗುಳಿಗೆ-ಚೂರ್ಣ-ಏನು ಮಾಡಿದೆ?” ಎಂದು ಕೇಳಿದ.

ವೀರಣ್ಣ ನಸುನಗುತ್ತಾ ಹೇಳಿದ:

“ಹೂಂ! ಅದೇ ಮತ್ತೆ ಇಷ್ಟು ಸಲೀಸಾಗಿ ಮಾಡಿದ್ದು. ನಿನ್ನೆ ರಾತ್ರಿ ನೀನು ಕೊಟ್ಟ ಚೂರ್ಣ ತೆಗೆದುಕೊಂಡು ಊಟಕ್ಕೆ ಹೋದೆ. ಊಟ ಆದ ಮೇಲೆ ಮೆಲ್ಲಗೆ ಅದನ್ನು ಗೌರಿಗೆ ತಿನ್ನಿಸೋಣಾ ಅಂತ ಸಮಯಾ ಕಾಯು ತ್ತಿದ್ದೆ. ರಾಜಪ್ಪ ಹಲ್ಲಿನೋವು ಅಂತ ನರಳಿದ್ದ. ನಿನ್ನ ಹತ್ತಿರ ಹೋಗಿ ಔಷಧಿ ತೆಗೆದುಕೊಂಡು ಬಾ .. ಅಂತ ನನ್ನ ಕಳುಹಿಸಿದ. ನಾನು ಅರ್ಧ ದಾರೀ ಬಂದೆ; ಆಗ ಗೌರಿಯ ಪ್ರೇಮ ಹೇಗಿದ್ರೂ ಸಂಪಾದಿಸಿದ್ದೇನೆ, ರಾಜಪ್ಪನ ವಾತ್ಸಲ್ಯವನ್ನೂ ಸಂಪಾದಿಸಿ ಬಿಡೋಣಾ...ಅಂತ ಬುದ್ಧಿ ಹೊಳೆದು, ಹಿಂದಿರುಗಿ ಹೋಗಿ ಔಷಧಿ ತಂದಿದೀನಿ ಅಂತ ನೀನು ಕೊಟ್ಟ ಚೂರ್ಣ ರಾಜಪ್ಪನಿಗೆ ತಿನ್ನಿಸಿ ಬಿಟ್ಟೆ!” *

---

* Love philtre of Ikey ಎಂಬ ಕಥೆಯ ಆಧಾರದಿಂದ ಬರೆದುದು.

# “ ಡೆಡೋನಿಯಾ ”

ಲಾಯರ್ ರಘುನಾಥರಾಯರು—ಹೌದು ಬೆಂಗಳೂರು ಚಾಮರಾಜ ಪೇಟೆಯಲ್ಲಿರುವವರು—ಕಛೇರಿಯಿಂದ ಸಂಜೆಗೆ ಮನೆಗೆ ಬಂದವರು, ಉಪಾಹಾರವನ್ನು ತೆಗೆದುಕೊಂಡ ಮೇಲೆ ಎಂದಿನಂತೆ ಸೀತಮ್ಮನ ಜತೆಗೆ—ಹೌದ್ರಿ ಅವರ ಹೆಂಡತಿ—ವಿನೋದಕ್ಕೆ ಕೂಡದೆ ಗಂಡುಕಚ್ಚೆ ಹಾಕಿ ಹೊಸದಾಗಿ ತಂದಿದ್ದ ಕೈಗುದ್ದಲಿ ತೆಗೆದುಕೊಂಡು ಹೊರಟರು. ಕಸೂತಿ ಹಾಕುತ್ತಾ ಕುಳಿತಿದ್ದ ಸೀತಮ್ಮನವರು ನಸುನಕ್ಕು ‘‘ಸರಿ, ಇನ್ನು ಮೂರು ತಿಂಗಳಿಗೆ ಲಾಲ್‌ಬಾಗ್ ಮುಚ್ಚಿಬಿಡಬೇಕಾಗುತ್ತೆ’’ ಎಂದು ಕುಚೇಷ್ಟೆಮಾಡಿದರು.

“ನೋಡುತ್ತಿರು, ಮನೆ ಮುಂದೆ ಹೂದೋಟ ಹೇಗಾಗುತ್ತೆ ಅಂತ” ಎಂದು ರಘುನಾಥರಾಯರು ಉತ್ತರವಿತ್ತು ಹೊರಗಡೆಗೆ ಬಂದರು.

* * *

ಸಂದರ್ಭ ಇಷ್ಟು: ರಘುನಾಥರಾಯರದು ಅಂದವಾದ ಚಿಕ್ಕ ಹೊಸ ಬಂಗಲೆ. ಕಾಂಪೌಂಡು ಉಂಟು. ಮನೆ ಮುಂದೆ ಪೌಳಿ ಗೋಡೆಯವರೆಗೂ ವಿಸ್ತಾರವಾದ ಜಾಗ. ಅಂದವಾದ ಹೂದೋಟ ಬೆಳೆಸಲು ಅನುಕೂಲಗಳುಂಟು. ಆದರೂ ತಮ್ಮ ಕಾಲವನ್ನೆಲ್ಲಾ ವಕೀಲಿ ವೃತ್ತಿಗೂ ಸೀತಮ್ಮನೊಡನೆ ಸಿನಿಮಾ ವಾಕಿಂಗ್ ವಿನೋದಗಳಿಗೂ ನಿವೇದನ ಮಾಡಿದ್ದ ರಘುನಾಥರಾಯರಿಗೆ ಹೂದೋಟದ ಭ್ರಮೆ ಮನಹೊಕ್ಕಿರಲಿಲ್ಲ. ಈಗ ಒಂದು ವಾರದ ಹಿಂದೆ ಅಂಚೆಯವನು ಭಾರವಾದ ಲಕೋಟೆಯೊಂದನ್ನು ತಂದು ಕೊಟ್ಟಾಗ, ಹೊಸ ಕೇಸಿಗೆ ವಕಾಲತ್ತನ್ನು ಯಾರೋ ಕಕ್ಷಿಗಾರರು ಕಳುಹಿಸಿರಬಹುದೆಂಬ ಆಕಾಂಕ್ಷೆಯಿಂದ ಅದನ್ನು ಹರಿದ ರಘುನಾಥರಾಯರ ಕೈಗೆ,

ಅಂದವಾದ ಬಣ್ಣದ ರಟ್ಟಿನ ಕ್ಯಾಟಲಾಗು ಒಂದು ಸಿಕ್ಕಿತು. ಮನಸ್ಸನ್ನು ಸೆರೆಹಿಡಿದು ನಿಲ್ಲಿಸುವ ಸೊಬಗುಳ್ಳ, ವಿವಿಧ ಬಣ್ಣಗಳಿಂದ ಕೂಡಿ ಸುಂದರ ವಾದ ಆಕೃತಿಯುಳ್ಳ ಹೂಗೊಂಚಲಿನ ಚಿತ್ರ ರಟ್ಟಿನ ಮಧ್ಯದಲ್ಲಿ ಮುದ್ರಿತ ವಾಗಿತ್ತು. ಈ ತೆರದ ಹೂ ಮನೆಯ ಮುಂದಿರದಿದ್ದರೆ ಅದು ಮನೆಯೆ?" ಎಂಬ ಹೃದಯವನ್ನು ಒಲಿಸಿಕೊಳ್ಳುವ ಪ್ರಶ್ನೆ ಕೆಳಗಡೆ ಎದ್ದು ಕಾಣುತ್ತಿತ್ತು. "ಡೆಡೋನಿಯಾ ಗಿಡ ಮನೆಯ ಸುತ್ತಲೂ ಇದ್ದರೆ ಅದಕ್ಕೂ ಹೆಚ್ಚಿನ ಅಲಂ ಕಾರವಿಲ್ಲ" ಎಂಬ ಸಿದ್ಧಾಂತ ಕೆಳಗಡೆಗೆ ಮುದ್ರಿತವಾಗಿತ್ತು.

"ಡೆಡೋನಿಯಾ
ಬೆಳೆದು ನೋಡಿ
ನೋಡಿ ಆನಂದಿಸಿ
ಆನಂದ ಅನುಭವಿಸಿ!"

ಎಂಬ ಆಹ್ವಾನವೂ ಕಾಣಬರುತ್ತಿತ್ತು.

ಈ ತೆರದ ಹೂಗೊಂಚಲುಗಳು ಕಾಂಪೌಂಡು ಗೋಡೆಯ ಸುತ್ತಲೂ ಇದ್ದರೆ ನಿಜವಾಗಿಯೂ ಚೆನ್ನಾಗಿರುತ್ತದೆಂದು ರಘುನಾಥರಾಯರು ನಿರ್ಧರಿಸಿ ದರು. ಲಾಲ್‌ಬಾಗಿನಲ್ಲಿ ಬೆಳೆದಿದ್ದ ಹೂಗಳು ಯಾವೂ ರಘುನಾಥರಾಯರ ಮೇಲೆ ಇಷ್ಟು ಪರಿಣಾಮ ಮಾಡಿರಲಿಲ್ಲ. ಕೈಯಲ್ಲಿದ್ದ ಕ್ಯಾಟಲಾಗಿನ ಮೇಲೆ ಮನೋಹರವಾಗಿ ಚಿತ್ರಿಸಿದ್ದ ಆ ಗೊಂಚಲಿನ ರಮ್ಯತೆಯೂ ಅದರ ಕೆಳಗೆ ಮೂದಲಿಸುತ್ತಿದ್ದ ಮಾತುಗಳೂ ರಘುನಾಥರಾಯರ ಸರಳ ಹೃದಯವನ್ನು ಗೆದ್ದವು.

"ಡೆಡೋನಿಯಾ—ಆರಿಸಿದ, ವಿವಿಧ ಬಣ್ಣಗಳ ವಿದೇಶೀ-ಹೂವಿನ ಬೀಜ ಗಳ ಪೊಟ್ಟಣ; ಮೂರೇ ರೂಪಾಯಿ" ಎಂದು ನಮ್ರತೆಯಿಂದ ಹೇಳುತ್ತಿದ್ದ ವಾಕ್ಯ ರಘುನಾಥರಾಯರನ್ನು ಕಾರ್ಯದ ಕಡೆ ತಿರುಗಿಸಿತು. ಬಂದಿದ್ದ ಕ್ಯಾಟಲಾಗಿನೊಂದಿಗೆ ಕಂಪನಿಯ ವಿಳಾಸ ಮುದ್ರಿತವಾಗಿದ್ದ ಲಕೋಟೆಯೂ ಅಪೇಕ್ಷಾ ಪತ್ರವೂ ಇದ್ದವು. "ಇದನ್ನು ಸ್ಟಾಂಪು ಅಂಟಿಸದೆ ಅಂಚೆಗೆ ಹಾಕ ಬಹುದು" ಎಂಬ ವಿನಂತಿ ಅದರ ಮೇಲೆ ಬರೆದಿತ್ತು. ಸರಿ, ರಘುನಾಥ ರಾಯರು ಎರಡು ಪೊಟ್ಟಣಗಳಿಗಾಗಿ ಬರೆದುಹಾಕಿದರು. ಆ ದಿನ ಸಂಜೆಗೆ

ಮನೆಗೆ ಬಂದಾಗ ಸೈಕಲ್ ಕ್ಯಾರಿಯರಿನ ಮೇಲೆ ಕಟ್ಟಿದ್ದ ಕೈಗುದ್ದಲಿಯನ್ನು ಸೀತಮ್ಮನವರು ನೋಡಿ, "ಇದೇನು? ಕೋರ್ಟಿಗೆ ಹೋಗಿದ್ದಿರೋ? ಕೂಲಿಗೆ ಹೋಗಿದ್ದಿರೋ?" ಎಂದು ಕೇಳಿದರು.

ಹೂದೋಟದ ನಿರ್ಮಾಣದಲ್ಲಿ ರಘುನಾಥರಾಯರ ಉತ್ಸಾಹವನ್ನು ಹೇಳಿತೀರದು. ಮೊದಲ ದಿನ ಹದಿನೈದು ನಿಮಿಷ ಮನೆ ಮುಂದಿನ ಪೌಳಿ ಗೋಡೆಯ ಎರಡು ಮೂಲೆಗಳಲ್ಲಿಯೂ ಪಾತಿ ಮಾಡಲೋಸುಗ ನೆಲ ಅಗೆದರು. ಅನಂತರ ಮನೆಯೊಳಗೆ ಬಂದು ಎರಡು ಲೋಟ ನಿಂಬೆಹಣ್ಣಿನ ಪಾನಕ ಕುಡಿದರು.

ಸೀತಮ್ಮನೂ ಸಹಜವಾದ ಉತ್ಸುಕತೆಯಿಂದ "ಎಂಥ ಗಿಡ ಹಾಕುತ್ತೀರಿ?" ಎಂದು ಕೇಳಿದಳು.

"ಡೆಡೋನಿಯಾ!" ಒಂದು ಬಗೆಯ ಪರಸೀಯ ಉಚ್ಚಾರಣೆ.

"ಏನು? ಡ-ಢ-ಣ....?"

"ಡೆ-ಡೋ-ನಿ-ಯಾ—?"

"ಎಂಥ ಹೂವು ಅದು?"

ಮೇಜಿನ ಮೇಲಿದ್ದ ಕ್ಯಾಟಲಾಗನ್ನು ತಂದು ತಾನು ಮನ ಸೋತಿದ್ದ ಹೂಗೊಂಚಲನ್ನು ಸೀತಮ್ಮನಿಗೆ ತೋರಿಸಿ, "ನೋಡು, ಎಷ್ಟು ಚೆನ್ನಾಗಿದೆ" ಎಂದರು. "ಏನು ಚೆನ್ನವೋ! ಇದರ ಬದಲು ಗುಲಾಬಿ ಮಲ್ಲಿಗೆ ಹಾಕಿದರೆ, ದೇವರ ಪೂಜೆಮಾಡಿ ಹೂವು ಮುಡಿಯಬಹುದು ಎಂದರು ಸೀತಮ್ಮ."

* * * *

ಮೂರು ದಿವಸದಲ್ಲಿ ಪಾತಿಗಳು ಆದವು. ಆಮೇಲೆ ಎರಡು ದಿವಸ ಅವರಿವರ ಸಲಹೆಯ ಮೇರೆಗೆ ಪಾತಿಗಳಿಗೆ ಹೊಸ ಮಣ್ಣು ಗೊಬ್ಬರ ಭರ್ತಿಯಾದವು. ಮಗು ಹುಟ್ಟುವುದಕ್ಕೆ ಮುಂಚೆ ಸೂಲಗಿತ್ತಿಯನ್ನು ಸಿದ್ಧಪಡಿಸುವಂತೆ, ಬೀಜಗಳು ಬರುವುದಕ್ಕೆ ಮುಂಚೆ ರಘುನಾಥರಾಯರು ಎಲ್ಲಾ ಅಣಿ ಮಾಡಿಇಟ್ಟಿದ್ದರು. ಪ್ರತಿನಿತ್ಯವೂ ತೋಟದ ಕೆಲಸವಾದಮೇಲೆ ಒಂದು ಲೋಟ ಪಾನಕ. "ಒಂದು ನಿಂಬೆಹಣ್ಣಿನ ಗಿಡ ತಂದು ಮನೆ ಮುಂದೆ ನೆಡಿ ಅಂದ್ರೆ, ಆಗ ಸರಿಹೋಗುತ್ತೆ ಪಾನಕಕ್ಕೆ" ಎಂದು ಸೀತಮ್ಮನವರು ತಮಾಷೆ ಸಹ

ಮಾಡಿದರು. "ಡೆಡೋನಿಯಾ ಹೂ ಬಿಡಲಿ ತಾಳು, ಆಗ ನೀನೇ ಬಂದು ಎರಡು ಲೋಟ ಪಾನಕ ಹೆಚ್ಚಿಗೆ ಮಾಡಿಕೊಟ್ಟು ಹೂವು ಕೇಳ್ತೀಯಾ ಮುಡಿ ಯಲಿಕ್ಕೆ" ಎಂದು ರಘುನಾಥರಾಯರು ಸೀತಮ್ಮನಿಗೆ ಉತ್ತರವಿತ್ತಿದ್ದರು.

ಬೀಜಗಳ ಪೊಟ್ಟಣ ಬಂದ ದಿವಸ ರಘುನಾಥರಾಯರ ಉತ್ಸಾಹ ಹೇಳಿ ತೀರದು. ವಿ. ಪಿ. ಏನೆಂದು ಕೇಳಿದ್ದ ಲಾಯರು ಮಿತ್ರರಿಗೆ "ಡೆಡೋನಿಯಾ ಹೂವಿನ ಬೀಜ — ವಿಶೇಷೀದು — ಡೆಡೋನಿಯಾ ಹೂವು ಗೊತ್ತಿಲ್ವೇ— ಲಾಯರ್ ಕೆಲಸ ಇನ್ನೇನ್ರಿ ಮಾಡ್ತೀರಿ, ಅಷ್ಟು ಗೊತ್ತಿಲ್ಲದಿದ್ದರೆ" ಎಂದು ಉತ್ತರವಿತ್ತು ಅವರಿಗೆ "ಡೆಡೋನಿಯಾ"ದ ಪರಿಚಯ ಮಾಡಿಕೊಟ್ಟರು. ಆ ದಿನ ಮಧ್ಯಾಹ್ನ ಎರಡು ಗಂಟೆಗೇ ಮನೆಗೆ ಬಂದು Modern Review ನಲ್ಲಿ ಡಾ. ನೆಹರು ಬರೆದಿದ್ದ "Electro-culture" ಎಂಬ ಲೇಖನ ತೆಗೆದು, ಅದರಲ್ಲಿ ಬರೆದಿದ್ದಂತೆ ವಿದ್ಯುತ್ ಮಿಶ್ರಿತ ನೀರಿನಲ್ಲಿ ಬೀಜಗಳನ್ನು ನೆನೆಯಿಸಿ ಸಂಭ್ರಮದೊಡನೆ ಬೀಜ ಬಿತ್ತಿದರು. ಆ ದಿವಸ ಅವರು ಎರಡು ಲೋಟ ಪಾನಕ ಕುಡಿದರು. ಮಳೆಯಂತೆ ಧಾರೆಯಾಗಿ ನೀರು ಬೀಳುವಂತೆ ನೀರು ಹಾಕಲು ಅನುಕೂಲ ಮಾಡಿಟ್ಟ ತಗಡಿನ ಪಾತ್ರೆಯನ್ನೂ ತಂದಿದ್ದರು. ದಾರಿ ಯಲ್ಲಿ ಓಡಾಡುತ್ತಿದ್ದ ಪರಿಚಯಸ್ಥರನ್ನು ಒಳಗೆ ಕರೆದು "ಡೆಡೋನಿಯಾ" ಪಾತಿಗಳನ್ನು ತೋರಿಸಿದ್ದರು. "ಏನಂದಿರಿ – ಹೂಂ – ನೀರು ಹಾಕೋದರಲ್ಲಿ ಅವಮರ್ಯಾದೆಯೇನು? ಸಂಜೆಗೆ-ಬೇರೆ ಕೆಲಸವಿರುವುದಿಲ್ಲ-ಒಂದು ಹವ್ಯಾಸ, ವ್ಯಾಯಾಮಾನೂ ಆಗುತ್ತೆ. ಛೆ ಛೇ! ಡೆಡೋನಿಯಾ ಯಾವ ಹೂವಿಗೂ ಕಡಿಮೆ ಇಲ್ಲ. ಮಲ್ಲಿಗೆ ಹಾಕಬಹುದು; ಆದರೆ ಡೆಡೋನಿಯಾ ಅಂದ್ರೆ, ಅದರ ಸೊಬಗೇ ಬೇರೆ" ಹೀಗೆಂದು ಪ್ರಶ್ನೆಗಳಿಗೆ ತಕ್ಕಂತೆ ಉತ್ತರ ಕೊಡು ತ್ತಿದ್ದರು. ರಘುನಾಥರಾಯರು "ಡೆಡೋನಿಯಾ" ಬೆಳೆಯುವುದು ಆ ಬೀದಿ ಯವರಿಗೆಲ್ಲಾ ಮಹತ್ತರವಾದ ವಿಷಯವಾಗಿತ್ತು. ಪರಿಚಯಸ್ಥರು ಆಗಾಗ "ಮೊಳಕೆಯೆದ್ದಿದೆಯೆ?" ಎಂದು ಕೇಳಿದಾಗ ತಾವೇ ಸಸ್ಯಶಾಸ್ತ್ರದ ಪಂಡಿತ ರಂತೆ ರಘುನಾಥರಾಯರು "ಛೆ! ಛೆ! ಎಲ್ಲಾದರೂ ಉಂಟೆ! ಬೀಜ ಹಾಕಿದ ಹದಿನೆಂಟು ಇಪ್ಪತ್ತು ದಿವಸಗಳಿಗೆ ಮೊಳಕೆ ಒಡೆಯುವುದು" ಎಂದು ಹೇಳು ತ್ತಿದ್ದರು.

*  *  *  *

ಒಂದು ದಿನ ಸಂಜೆ ಸೀತಮ್ಮನವರು ಮಲ್ಲಿಗೆ ದಂಡೆ ಮುಡಿದುಕೊಂಡಿದ್ದಾಗ"ಮಧ್ಯೆ ಒಂದು ನೀಲಿ ಡೆಡೋನಿಯಾ ಇದ್ದರೆ ಎಷ್ಟು ಚೆನ್ನಾಗಿರುತ್ತೋ" ಎಂದು ರಘುನಾಥರಾಯರು ತಮ್ಮ ಹೆಂಡತಿಗೆ ಸೂಚಿಸಿದರು. "ಸರಿ, ಒಳ್ಳೇ ಡೆಡೋನಿಯಾ ಬಂತು ಅಂದ್ರೆ, ಸಿನೀಮಾ ನಾಕಿಂಗು ಎಲ್ಲಾ ಹಾಳಾಯ್ತು.... ಇದರಿಂದ" ಎಂದು ಸೀತಮ್ಮ ಹೇಳಿದರು.

ಬೀಜ ಬಿತ್ತಿದ ಸುಮಾರು ಇಪ್ಪತ್ತು ದಿವಸದ ಮೇಲೆ ಒಂದೊಂದಾಗಿ 'ಡೆಡೋನಿಯಾ' ಮೊಳಕೆ ಹುಟ್ಟಿದವು. ರಘುನಾಥರಾಯರ ಉತ್ಸಾಹ ಹೇಳಿತೀರದು. ಕಛೇರಿಯಲ್ಲಿ ಕೆಲವು ಮಿತ್ರರು "ಮಕ್ಕಳು ಹುಟ್ಟದಿದ್ದರೂ ಡೆಡೋನಿಯಾ ಹುಟ್ಟಿದವಲ್ಲಯ್ಯ; ಕಾಫಿ ತಿಂಡಿ ತರಿಸು" ಎಂದು ತಮಾಷೆ ಮಾಡಿದರು.

ಸಸಿಗಳೆಲ್ಲವೂ ಎಲೆ ಬಿಡಲಾರಂಭಿಸಿದವು. ರಾಮೇನಹಳ್ಳಿಯಲ್ಲಿ ವಾಸವಾಗಿದ್ದು ಅಲ್ಲಿಯೇ ಜಮೀನುದಾರಿ ಲೇವಾದೇವಿ ವೃತ್ತಿಯಲ್ಲಿದ್ದ ರಘುನಾಥರಾಯರ ಅಣ್ಣಂದಿರು, ಶ್ಯಾಮಣ್ಣನವರು ಒಂದು ದಿನ ಸ್ವಂತ ಕೆಲಸದ ನಿಮಿತ್ತ ಬೆಂಗಳೂರಿಗೆ ಬಂದರು. ಅವರು ಬಂದಾಗ ಸಂಜೆಯಾಗಿತ್ತು. 'ಡೆಡೋನಿಯಾ' ಸಸಿಗಳಿಗೆ ನೀರೆರೆಯುತ್ತಿದ್ದ ತಮ್ಮನ ಹೊಸ ಹವ್ಯಾಸವನ್ನು ನೋಡಿ ಸಂತೋಷದಿಂದ ಅಚ್ಚರಿಗೊಂಡು, "ಏನೋ ರಘು, ಏನು ಗಿಡ ಹಾಕಿದ್ದೀಯಾ" ಎಂದರು.

"ಡೆಡೋನಿಯಾ; ವಿದೇಶೀ ಜಾತಿಯವು. ಹೂವು ಹೇಗಿರುತ್ತವೆ ಅಂತೀಯಾ. ಇದರ ಮುಂದೆ ಗುಲಾಬಿ ನಿಲ್ಲುವುದಿಲ್ಲ. ಹಳ್ಳಿಗೆ ಒಂದೆರಡು ಸಸಿ ತೆಗೆದುಕೊಂಡು ಹೋಗು" ಎಂದು ರಘುನಾಥರಾಯರು ಹೇಳಿದರು.

ಹೊಸ ಹೆಸರಿನ ಹೊಸ ಗಿಡಗಳನ್ನು ನೋಡಲು ಉತ್ಸುಕತೆಯಿಂದ ಶ್ಯಾಮಣ್ಣನವರು ಪಾತಿಯ ಬಳಿಗೆ ಬಂದು ಬಗ್ಗಿನೋಡಿ ಪರಿಶೀಲಿಸಿ, "ಏನೋ ರಘು! ಬಂದರಿಕೆ (ಬಣದುರುಬಿ) ಸೊಪ್ಪಿನ ಸಸಿ ಇದ್ದ ಹಾಗೇ ಇವೆಯಲ್ಲೋ" ಎಂದರು.

ರಘುನಾಥರಾಯರು ಖೊಳ್ಳನೆ ನಕ್ಕರು. "ಬಂದರಿಕೇನೇ! ಛಿ! ಛೀ! ಬಂದರಿಕೆ ಎಲ್ಲಿ-ಡೆಡೋನಿಯಾ ಎಲ್ಲಿ? ಎಲ್ಲಾದರೂ ಉಂಟೆ? ಅದು ಡೆಡೋನಿಯಾ ಶ್ಯಾಮಣ್ಣ – ಅಪರೂಪ ಹೂ!"

ಶ್ಯಾಮಣ್ಣನವರು ಮತ್ತೊಮ್ಮೆ ಸಸಿಗಳನ್ನು ಪರಿಶೀಲಿಸಿ "ಏನೋ ಅಪ್ಪಾ, ನನ್ನ ಕಣ್ಣಿಗೆ ಬಂದರಿಕೆ ಸೊಪ್ಪಿನ ಗಿಡಗಳ ಹಾಗೇ ಕಾಣುತ್ತವೆ. ಯಾರು ಬಲ್ಲರು" ಎಂದುಬಿಟ್ಟರು.

* * * *

ಸಸಿಗಳು ಚೆನ್ನಾಗಿ ಬೆಳೆಯುತ್ತಾ ಬಂದವು. ಸುಮಾರು ಒಂದು ಚೋಟು ಎತ್ತರ ಬಂದಿದ್ದವು. ರಘುನಾಥರಾಯರ ಉತ್ಸಾಹವೂ ಬೆಳೆಯುತ್ತಾ ಬಂತು. "ಹೂ ಎಂದು ಬಿಟ್ಟೀತು, ಎಲ್ಲರಿಗೂ ಎಂದು ತೋರಿಸೇನು, ಸೀತಾಗೆ ಎಂದು ಹೂ ಮುಡಿಯಲಿಕ್ಕೆ ಕೊಟ್ಟೇನು" ಎಂದು ರಾಯರು ಹಂಬಲ ಪಡುತ್ತಿದ್ದರು.

ಒಂದು ದಿನ ಸಂಜೆಗೆ ರಘುನಾಥರಾಯರ ಕಕ್ಷಿಗಾರನಾದ ಗಿಡ್ಡನಹಳ್ಳಿ ಪಟೇಲ ಮಾದಪ್ಪ ರಘುನಾಥರಾಯರನ್ನು ಕಾಣಲೋಸುಗ ಅವರ ಮನೆಗೆ ಬಂದ. ಸಸಿಗಳಿಗೆ ನೀರೆರೆಯುತ್ತಿದ್ದ ರಘುನಾಥರಾಯರನ್ನು ನೋಡಿ "ಏನು ಸ್ವಾಮಿ, ಖುದ್ದು ನಿಂತು ಗಿಡದ ಕೆಲಸ ಮಾಡುತ್ತಿದ್ದೀರಿ" ಎಂದ.

"ಅಂ ? - ಹೌದು. ಸಂಜೆ ಹೊತ್ತು ಇನ್ನೇನು ಕೆಲಸವಿರುವುದಿಲ್ಲ. ಒಳಗೆ ಬಾ. ಏನು ಬಂದಿದ್ದೆ?"

"ಸ್ವಲ್ಪ ಕೆಲಸ ಇತ್ತು ಸ್ವಾಮಿ. ನಿಮ್ಮ ಕೆಲಸ ಮುಗಿದ ಮೇಲೆ ಮಾತಾಡೋಣ. ಅವು ಯಾತರ ಸಸಿ ಸ್ವಾಮಿ ?"

"ಇವೇ - ಇಂಗ್ಲೀಷ್ ಗಿಡ. ಹೂವು ಬಿಡುತ್ತೆ. ಗುಲಾಬಿಗೆ ಇದು ಬಲಗೈ."

"ಹಂಗೇನೂ! ನಮಗೆರಡು ಸಸಿ ಕೊಡಿ ಸ್ವಾಮಿ" ಎಂದು ಕೇಳುತ್ತಾ ಪಟೇಲ್ ಮಾದಪ್ಪ ಪಾತಿಯ ಬಳಿ ಬಂದು ಸಸಿಗಳನ್ನು ಹತ್ತಿರದಲ್ಲಿ ನೋಡಿದವನೆ, "ಬಿಡಿ ಸ್ವಾಮಿ. ನನ್ನ ಕೂಡ ತಮಾಷೆಯೆ ನಿಮಗೆ ? ಅಲ್ಲ, ಬಂದರಿಕೆ ಸಸಿ ಏಕೆ ಸ್ವಾಮಿ, ಇಷ್ಟು ಕಷ್ಟಪಟ್ಟು ಬೆಳೆಸುತೀರಿ. ಎದುರಿಗೇ ಪಸಂದಾಗಿ ಬೆಳೆದಿವೆ" ಎಂದು ಎದುರು ಓಣಿಯಲ್ಲಿ ಚರಂಡಿಯ ಎರಡು ಕಡೆಗಳಲ್ಲೂ ದಟ್ಟವಾಗಿ ಬೆಳೆದಿದ್ದ ಬಂದರಿಕೆ (ಬಣದುರುಬಿ) ಗಿಡಗಳನ್ನು ತೋರಿಸಿದ. ರಘುನಾಥರಾಯರಿಗೆ ಸ್ವಲ್ಪ ಅನುಮಾನ ಬಂದರೂ ತೋರ್ಪಡಿಸದೆ "ಛೆ! ಛೇ!

ಏನು ಮಾತು ನಿಂದು? ಕರೀ ಸೀರೆ ಗಾದೆ ಮಾತಾಡ್ತಿದ್ದೀಯಾ, ಅಷ್ಟೆ ಎಂದುಬಿಟ್ಟರು.

* * * *

ಮರುದಿವಸ ರಘುನಾಥರಾಯರು ಕಛೇರಿಯಿಂದ ಮನೆಗೆ ಬರುವಾಗ ಕಾಲೇಜಿಗೆ ಹೋದರು. ಕಾಲೇಜಿನಲ್ಲಿ ಅವರ ಮಿತ್ರರೊಬ್ಬರು ಸಸ್ಯಶಾಸ್ತ್ರದ ಅಧ್ಯಾಪಕರು. ಅವರೊಡನೆ ಆ ಮಾತು ಈ ಮಾತು ಆಡುತ್ತಾ "ಡೆಡೋನಿಯಾ ಎಂದರೆ ಏನಯ್ಯ?" ಎಂದು ಕೇಳಿದರು. ಅವರು "ಇಷ್ಟು ಗೊತ್ತಿಲ್ಲದಿದ್ದರೆ ಏನು ವಕೀಲಿ ಮಾಡುತ್ತೀಯಯ್ಯ. ಡೆಡೋನಿಯಾ ಎಂದರೆ ಬಂದರಿಕೆ ಸೊಪ್ಪಿನ ಗಿಡ" ಎಂದು ಅರ್ಥ ಹೇಳಿದರು.

ಆ ಸಾಯಂಕಾಲ ರಘುನಾಥರಾಯರು ಡೆಡೋನಿಯ ಸಸಿಗಳಿಗೆ ನೀರೆರೆಯಲಿಲ್ಲ. ಬಂದವರೇ ಸೀತಮ್ಮನನ್ನು ಸಿನಿಮಾಕ್ಕೆ ಕರೆದುಕೊಂಡು ಹೋದರು. ಮರುದಿವಸ ಸಾಯಂಕಾಲವೂ ಗಿಡಗಳಿಗೆ ನೀರಿಲ್ಲ. ಅವು ಬಾಡಿದವು. ರಘುನಾಥರಾಯರು ಸೀತಮ್ಮನನ್ನು ಲಾಲ್‌ಬಾಗಿಗೆ ಕರೆದು ಕೊಂಡು ಹೋದರು. ಮರುದಿವಸ ಭಾನುವಾರ. ಆ ದಿವಸ ನಾಲ್ಕು ಗಂಟೆಗೇ ದಂಪತಿಗಳು ಗಾಯನ ಸಮಾಜಕ್ಕೆ ಸಂಗೀತಕ್ಕೆ ಹೋದರು. ಡೆಡೋನಿಯಾ ಸಸಿಗಳು ಒಣಗಿದವು.

* * * *

ಒಂದು ವಾರದ ಮೇಲೆ ಸೀತಮ್ಮನವರ ತಮ್ಮ ಕಣ್ಣು ಪರೀಕ್ಷೆ ಮಾಡಿಸಿ ಕೊಳ್ಳಲೋಸುಗ ಬೆಂಗಳೂರಿಗೆ ಬಂದ. ಆ ದಿನ ರಾತ್ರಿ ಅಕ್ಕ ಭಾವ ಇವ ರೊಂದಿಗೆ ಮಾತನಾಡುತ್ತಾ ಎದುರು ಮೇಜಿನ ಮೇಲಿದ್ದ ಕ್ಯಾಟಲಾಗನ್ನು ನೋಡಿ ಓದುತ್ತಾ, "ಭಾವ ಡೆಡೋನಿಯಾ ಎಂದರೇನು?" ಎಂದು ಕೇಳಿದ. ರಘುನಾಥರಾಯರು ಸೀತಮ್ಮನ ಕಡೆ ನೋಡದೆ "ಡೆಡೋನಿಯಾ ಎಂದರೆ ಬಂದರಿಕೆ ಎಂದರ್ಥ" ಎಂದು ಹೇಳಿದರು.

ಸೀತಮ್ಮನವರು ಬಹಳ ಕಷ್ಟಪಟ್ಟು ನಗುವನ್ನು ತಡೆದುಕೊಂಡರು. ಆದರೂ ಅವರ ತುಟಿಗಳ ಮೇಲೆ ರಘುನಾಥರಾಯರು ಪತ್ತೆಮಾಡಿದ ನಸು ನಗೆ ಮಿಂಚಿತು.

---

# ಜರತಾರಿ ಸೀರೆ

ಕಳ್ಳ ರಾಮನು ಚೆನ್ನಮ್ಮನಿಗೆ ಮನಸೋತು ಕಳ್ಳತನ ಬಿಟ್ಟು ಚೆನ್ನಮ್ಮನನ್ನು ಮದುವೆಯಾಗಿ, ಕೂಲಿ ಕೆಲಸದಿಂದ ಜೀವನ ಮಾಡುತ್ತಾ ಸಭ್ಯ ನಾಗರಿಕನಾಗಿದ್ದ ವಿಷಯವನ್ನು, ಕಳ್ಳರಾಮನ ಕಥೆಗಳನ್ನು ಕೇಳಿದವರೆಲ್ಲರೂ ಬಲ್ಲರಷ್ಟೆ. ಕಳ್ಳರಾಮ---ಅಲ್ಲ ಅಲ್ಲ—ರಾಮ, ತಾನು ಇನ್ನು ಮುಂದೆ ಎಂದೆಂದೂ ಕಳ್ಳತನ ಮಾಡುವುದಿಲ್ಲವೆಂದು ತನ್ನ ಲಗ್ನದ ದಿವಸ ಚೆನ್ನಮ್ಮನೆದುರಿಗೆ ಹೀಗೆ ಪ್ರಮಾಣಮಾಡಿದ್ದ: "ನೋಡು ಚೆನ್ನಿ, ಕೂಲಿ ಮಾಡುತ್ತೇನೆ. ಅದರಿಂದ ಬಂದ ದುಡ್ಡಿನಿಂದ ನಮ್ಮಿಬ್ಬರ ಸಂಸಾರ ಜರುಗುತ್ತದೆ. ದುಡ್ಡಿಲ್ಲದಿದ್ದರೆ ನಗುನಗುತ್ತ ಉಪವಾಸ ಮಾಡೋಣ. ಆದರೆ ಇನ್ನು ಮುಂದೆ ನಿನ್ನ ಮುಖದಾಣೆ, ಕದಿಯೊಲ್ಲ!'' ಎಂದು ಹೇಳಿದ್ದ. ಚೆನ್ನಮ್ಮ "ರಾಣಿಯಾಗಿ ಸಂಗೀತ ಕೇಳೋದಕ್ಕಿಂತ ನಿನ್ನ ಹೆಂಡತಿಯಾಗಿ ಈ ಮಾತು ಕೇಳೋದೇ ಇಂಪು" ಎಂದಿದ್ದಳು.

ಕಳ್ಳತನ ಬಿಟ್ಟಿದ್ದರಿಂದ ರಾಮನಿಗೆ ಬಂದ ಕೊರತೇ ಒಂದೆ ಒಂದು. ಅದು ಅವನ ಬಟ್ಟೆಗಳ ವಿಷಯದಲ್ಲಿ. ಅವನು 'ಕಸಬು' ಮಾಡುತ್ತಿದ್ದಾಗ ಶಿಲ್ಕು ಷರಟು, ರೇಷ್ಮೆ ಅಂಚಿನ ಬೊಂಬಾಯಿ ಪಂಚೆ ಇವುಗಳನ್ನು ಬಿಟ್ಟು ಬೇರೆ ಯಾವುದನ್ನೂ ಧರಿಸುತ್ತಲೇ ಇರಲಿಲ್ಲ. ಶಿಲ್ಕು ಷರಟು ಎಂದರೆ ರಾಮನಿಗೆ ಪ್ರಾಣ. ಎಷ್ಟೋ ಸಮಯಗಳಲ್ಲಿ ಅವನಲ್ಲಿದ್ದ ಸ್ವಲ್ಪ ಹಣಕ್ಕಾಗಿ, ಅವನ ಹೊಟ್ಟೆಯ ಪಾಡಿಗೂ ಇತರ ಸುಖಕ್ಕೂ ಶಿಲ್ಕು ಷರಟಿಗೂ ಪೈಪೋಟಿ ನಡೆದು ಹಣವೆಲ್ಲಾ ಎರಡನೆಯದರ ಪಾಲಾಗುತ್ತಿತ್ತು. ಅವನು ಕಳ್ಳತನ ಬಿಟ್ಟು ಸಭ್ಯನಾದಂದಿನಿಂದ ಅವನಿಗೆ ಷೋಕಿ ಮಾಡಲು ಆಗುತ್ತಿರಲಿಲ್ಲ. ಹಿಂದೆ ಹೊಲಿಸಿದ್ದ ಶಿಲ್ಕು ಷರಟುಗಳು ಹರಿದು ಹರಿದು ಹೋದಂತೆ, ಹೊಸದಾಗಿ ಹೊಲಿಸಿದವುಗಳೆಲ್ಲಾ ಅತಿ ಸಾಧಾರಣ ಚಕ್ಕುಬಟ್ಟೆಗಳವೇ ಆಗಿರುತ್ತಿದ್ದವು. ಈಗ ಅವನು ಎಂತಹ ಕನಿಷ್ಠ ದರ್ಜೆಯ ಬಟ್ಟೆಯನ್ನಾದರೂ ತೊಡಲು ತಯಾರಾಗಿದ್ದ. ಆದರೂ ಮನದಲ್ಲಿ ಮಾತ್ರ

ಒಂದು ಕೊರತೆ ಇತ್ತು; ತಾನು ಬಟ್ಟೆಗಳ ವಿಷಯದಲ್ಲಿ ಇಷ್ಟು ಸುಖಪಟ್ಟಿದ್ದರೂ ತನ್ನ ಹೆಂಡತಿ ಚೆನ್ನಮ್ಮ, ಎರಡೂವರೆ ರೂಪಾಯಿಯ ಕರಿಯ ಸೀರೆಯಲ್ಲದೆ ಉತ್ತಮ ತರದ ಸೀರೆಯನ್ನು ಇದುವರೆಗೂ ಉಟ್ಟು ಆನಂದಿಸಿಲ್ಲವಲ್ಲಾ....ಎಂದು. ಚೆನ್ನಿ ಎಂದೂ ಒಳ್ಳೆಯ ಸೀರೆಯ ವಿಷಯವನ್ನು ಪ್ರಸ್ತಾಪ ಮಾಡಿರಲಿಲ್ಲ. ರಾಜನ ಹೆಂಡತಿಯಾಗಿ ಪೀತಾಂಬರವನ್ನುಡುವುದಕ್ಕಿಂತ ರಾಮನ ಹೆಂಡತಿಯಾಗಿ ಎರಡೂವರೆ ರೂಪಾಯಿ ಸೀರೆ ಉಡುವುದೇ ಅವಳಿಗೆ ಹೆಚ್ಚು ಹಿತಕರವೆನಿಸುತ್ತಿತ್ತು. ಬೆಲೆಯುಳ್ಳ ಜರತಾರಿ ಸೀರೆಯ ಮೇಲೆ ಅವಳಿಗೆ ಆಶೆ ಇಲ್ಲವೆಂದಲ್ಲ; ತನಗೆ ಜರತಾರಿ ಸೀರೆಯನ್ನು ತೆಗೆದುಕೊಡಲು ರಾಮನಿಗೆ ಚೈತನ್ಯವಿಲ್ಲವೆಂದೂ, ಒಂದು ವೇಳೆ ಒತ್ತಾಯಮಾಡಿದರೆ ಎಲ್ಲಿ ಕಳ್ಳತನಮಾಡಿ ಸೀರೆಯನ್ನು ತಂದುಬಿಡುವನೋ ಎಂಬ ಭಯದಿಂದಲೂ, ತನ್ನ ಜೀವಮಾನದಲ್ಲಿ ಒಂದಾವರ್ತಿಯಾದರೂ ಜರತಾರಿ ಸೀರೆಯನ್ನುಡಬೇಕೆಂದಿದ್ದ ತನ್ನ ಮನದಾಸೆಯನ್ನು ಆಕೆ ರಾಮನೆದುರು ಬಹಿರಂಗಪಡಿಸಿರಲಿಲ್ಲ.

* * * *

ಒಂದು ದಿನ ಸಾಯಂಕಾಲ ತನ್ನ ಗುಡಿಸಿಲ ಮುಂದೆ ನಿಂತಿದ್ದಾಗ ಎದುರು ಮನೆಯಲ್ಲಿದ್ದ ಮೇಸ್ತ್ರಿಯ ಹೆಂಡತಿ ಜರತಾರಿ ಸೀರೆಯನ್ನು ಉಟ್ಟಿದ್ದುದನ್ನು ನೋಡಿ ಚೆನ್ನಿ "ಆಹಾ! ಆ ಸೀರೆ ಎಷ್ಟು ಚೆನ್ನಾಗಿದೆ" ಎಂದು ಸ್ವಲ್ಪ ಗಟ್ಟಿಯಾಗಿಯೇ ನುಡಿದಳು. ಅವಳ ಹಿಂದೆಯೆ ನಿಂತಿದ್ದ ರಾಮು ಕೂಡಲೆ ಅವಳ ಹೃದಯದ ಆಕಾಂಕ್ಷೆಯನ್ನು ಗುರುತಿಸಿ, ಹೇಗಾದರೂ ಮಾಡಿ ತಾನೂ ಭಾರಿ ಬೆಲೆಯುಳ್ಳ ಜರತಾರಿ ಸೀರೆಯನ್ನುಟ್ಟೆದೇನೆಂಬ ಸಮಾಧಾನವನ್ನು ಚೆನ್ನಿಗೆ ಉಂಟುಮಾಡಬೇಕೆಂದು ಸಂಕಲ್ಪಮಾಡಿದ.

ಮರುದಿವಸ ಸಾಯಂಕಾಲ ರಾಮು ಕೆಲಸ ಮುಗಿಸಿಕೊಂಡು ಹಿಂದಿರುಗಿ ಬರುವಾಗ ಕಾಗದದಲ್ಲಿ ಸುತ್ತಿದ್ದ ಒಂದು ಗಂಟನ್ನು ತೆಗೆದುಕೊಂಡು ಬಂದು ಚೆನ್ನಿಗೆ ಅದನ್ನು ತೋರಿಸಿ "ಚೆನ್ನಿ, ಇದರಲ್ಲಿ ಏನಿದೆ ಹೇಳು ನೋಡೋಣ?" ಎಂದ. "ನೀನು ಷರಟು ಹೊಲಿಸಿಕೊಂಡು ಬಂದಿರಬೇಕು; ಇರುವ ಒಂದೇ ಒಂದು ಷರಟು ಬರೀ ತೂತು" ಎಂದಳು ಚೆನ್ನಿ.

"ಇಲ್ಲ, ಮತ್ತೆ ಹೇಳು ನೋಡೋಣ!"

"ಸರಿ ಹಾಗಾದರೆ, ಪಂಚೆ ತಂದಿದೀಯ. ನಿನ್ನ ಪಂಚೆಗೆ ತ್ಯಾಪೆ ಹಚ್ಚಿ ಹಚ್ಚಿ ನನಗೆ ಸಾಕಾಗಿತ್ತು."

"ಅಲ್ಲಾ"

"ಹಾಗಾದರೆ ನೀನೇ ಹೇಳು."

"ಜ—ರ—ತಾ—ರಿ"

"ಅಹಾ !!"

"ಹೂಂ"

ಚೆನ್ನಮ್ಮ ರಾಮನಿದ್ದೆಡೆಗೆ ಚಿಮ್ಮಿ ಬಂದು ಗಂಟನ್ನು ಕಿತ್ತುಕೊಂಡು ಕಾಗದ ಹರಿದು ನೋಡಿದಳು.

ನೀಲಿ ಬಣ್ಣದ ಜರತಾರಿ ಸೀರೆ! ತನಗೆ ಬಹಳ ಇಷ್ಟವಾದ ಬಣ್ಣ. ಹೊಸ ಸೀರೆ! ಜರತಾರಿ ಹೊಳೆಯುತ್ತಿತ್ತು. ಅಂಚು ನಾಲ್ಕು ಬಟ್ಟು ಜರ ತಾರಿ! ಸೆರಗೆಲ್ಲಾ ಜರತಾರಿ ಹೂ! ಚೆನ್ನಿಯ ಮುಖ ಹುಣ್ಣಿವೆ ಚಂದ್ರ ನಂತಾಯಿತು. ಆಶ್ಚರ್ಯ, ಆನಂದ, ಉತ್ಸಾಹ, ಕೈಗೂಡಿದ ಆಶೆ! ಆ ಮನೋ ಹರ ದೃಶ್ಯವನ್ನು ನೋಡಿ ರಾಮ ಮುಗ್ಧನಾದ. ಸ್ವಲ್ಪ ಹೊತ್ತಾದ ಮೇಲೆ ಚೆನ್ನಿ ಆನಂದದ ವೇಗವನ್ನು ತಡೆದು ಧ್ವನಿ ಹುಡುಕಿ "ಜರತಾರಿ ಸೀರೆ" ಎಂದು ಉಸುರಿದಳು. ರಾಮ "ಹೌದು ಚೆನ್ನಿ. ಬರೀ ಜರತಾರಿ ಸೀರೆ, ಅಷ್ಟೆ. ನಿನ್ನ ಸೌಂದರ್ಯಕ್ಕೆ, ನೀನು ಉಡುವುದಕ್ಕೆ, ಒಪ್ಪುವ ಸೀರೆಯನ್ನು ಇನ್ನೂ ಯಾರೂ ನೆಯ್ದಿಲ್ಲ" ಎಂದ.

ಚೆನ್ನಮ್ಮ ಸೀರೆಯನ್ನು ಎದೆಗವಚಿಕೊಂಡಳು. ಆಗ ರಾಮನಿಗೆ ತಾನೇ ಸೀರೆಯಾಗಬಾರದಿತ್ತೆ ಎನಿಸಿತು. ಅನಂತರ ಚೆನ್ನಿ "ಎಷ್ಟು ಖರೀದಿ? ಜರತಾರಿ ಸೀರೆ ಬಹಳ ಖರೀದಿ ಅಲ್ಲವೆ?" ಎಂದಳು.

"ಏನು ಖರೀದಿ ಆಗುತ್ತೆ. ಈ ಸೀರೆಗೆ ಐವತ್ತು ರೂಪಾಯಿ. ನಿನ್ನೆ ಮೇಸ್ತ್ರಿ ಹೆಂಡತಿ ಉಟ್ಟಿದ್ದ ಸೀರೆ ಮೂವತ್ತೆರಡೇ. ಅದಕ್ಕಿಂತ ಇದು ಒಳ್ಳೇ ಜರತಾರಿ. ಅದೇ ಅಂಗಡಿಯಲ್ಲೇ ಈ ಸೀರೆ ತಂದೆ. ನೀನು ಈ ಸೀರೆ ಉಟ್ಟರೆ ಹೇಗಿರುತ್ತೀ ಗೊತ್ತೆ? ಹೂವೆರಚಿದ ಬಳ್ಳಿ!"

ಸೀರೆಯ ಬೆಲೆಯನ್ನು ಕೇಳಿ ಚೆನ್ನಿ ಬೆಚ್ಚಿದಳು. ಮನದಲ್ಲಿ ಊಹಾ

ತರಂಗ ಮೂಡಿತು. ಅರಳಿದ ಮುಖ ಕ್ರಮವಾಗಿ ಬಾಡಿತು. ಹಿಗ್ಗಿದ ಆನಂದ ಕುಗ್ಗಿತು. ಒಂದು ಸಲ ಸೀರೆಯನ್ನು ನೋಡಿ, ಅನಂತರ ದುಃಖದಿಂದ ತುಂಬಿದ ಅರ್ಥಗರ್ಭಿತವಾದ ನೋಟದಿಂದ ರಾಮನನ್ನು ನೋಡಿದಳು. ಇದು ವರೆಗೂ ರಾಮನಲ್ಲಿ ಇಟ್ಟಿದ್ದ ಹಿರಿದಾದ ಒಂದು ನಂಬಿಕೆ ಇಂದು ತಪ್ಪಿದಂತೆ ಅವಳ ಮುಖದಲ್ಲಿ ಭಾಸವಾಗುತ್ತಿತ್ತು. ರಾಮ ಅವಳ ಇಂಗಿತವನ್ನರಿತು "ಅಯ್ಯೋ ಹುಚ್ಚಿ! ಕದಿಯೊಲ್ಲಾ ಅಂತ ಪ್ರಮಾಣ ಮಾಡಿಲ್ಲವೆ. ನಿನ್ನ ಮುಖ ದಾಣೆ ಇದನ್ನ ಕದೀಲಿಲ್ಲ; ದುಡ್ಡು ಕೂಡಿ ಹಾಕಿದ್ದೆ. ಅದರಲ್ಲಿ ತಂದಿದೇನೆ ಇದನ್ನ!'' ಎಂದ.

"ನೀನು ಸಂಪಾದಿಸಿದ್ದರಲ್ಲಿ ಕೂಡಿ ಹಾಕಿದ್ದೆಯಾ? ಎಲ್ಲಿ ಕೂಡಿ ಹಾಕಿದ್ದೆ?" ತಿಂಗಳಿಗೆ ಹತ್ತು ರೂಪಾಯಿಗಳ ಮೇಲೆ ಸಿಗೋದು ಭಂಡಾಟ!"

''ಸರಿ ಬಿಡು. ಕಳವು ಮಾಡಿಲ್ಲಾ ಎಂದರೆ ನಂಬಬೇಕು; ಈಗ ಒಂದು ವರ್ಷದಿಂದ ಕೆಲಸ ಮಾಡಿದ್ನು, ತಿಂಗಳಿಗೆ ಒಂದೊಂದು ರೂಪಾ ಯಂತೆ ಹೆಚ್ಚಿಗೆ ಬಂದಿದೆ. ಕಂಟ್ರಾಕ್ಟರ್ ಬಳಿ ಇತ್ತು. ಆ ಹನ್ನೆರಡು ರೂಪಾಯಿ ಕೊಟ್ಟೆ. ತಿಂಗಳಿಗೆ ಎರಡು ರೂಪಾಯಿಯಂತೆ ಬಾಕಿ ಹಣಕ್ಕೆ ಅಂಗಡಿಯಲ್ಲಿ ಕಂತು ಮಾಡಿಕೊಂಡಿದೇನೆ.''

ಚೆನ್ನಿಯ ಮುಖದಲ್ಲಿ ಹರಡಿದ್ದ ಮೋಡ ಹೋದವು; ಬಾಡಿದ್ದ ಮುಖ ಅರಳಿತು. ಕುಗ್ಗಿದ್ದ ಆನಂದ ಹಿಗ್ಗಿತು; ಕಳಚಿಬಿದ್ದಿದ್ದ ನಂಬಿಕೆ ಭದ್ರವಾಯ್ತು. ಆ ಗುಡಿಸಿಲಲ್ಲಿ ಚಂದ್ರ ಮತ್ತೊಮ್ಮೆ ಮೂಡಿದ. ಪ್ರೇಮದ ಬೆಳುದಿಂಗಳು ಹರಿಯಿತು.

* * * *

ಮರುದಿನ ಭಾನುವಾರ. ರಾಮನಿಗೆ ರಜಾ ದಿವಸ. ಆ ದಿನ ಸಂಜೆ ಚೆನ್ನಮ್ಮ ಹೊಸ ಜರತಾರಿ ಸೀರೆಯನ್ನುಟ್ಟಳು. ಹಬ್ಬಗಳಿಗೆಂದು ತೆಗೆದಿಟ್ಟಿದ್ದ ಹಿಂದಿನ ಕಾಲದಿಂದ ಉಳಿದು ಬಂದಿದ್ದ ಶಿಲ್ಕು ಷರಟನ್ನು ರಾಮ ಧರಿಸಿದ. ಇಬ್ಬರೂ ಆ ದಿನ ತಮ್ಮ ಕೇರಿಯಲ್ಲೆಲ್ಲಾ ರಾಜ-ರಾಣಿಯರಂತೆ ತಿರುಗಾಡಿ ದರು. ಎಲ್ಲಾ ಹೆಂಗಸರ ಕಣ್ಣೂ ಮಾತ್ಸರ್ಯದಿಂದ ಚೆನ್ನಿಯ ಸೀರೆಯನ್ನು ನೋಡುತ್ತಿದ್ದವು.

ಬೀಟು ತಿರುಗುವುದಕ್ಕೆ ಆ ಕಡೆಗೆ ಪೋಲೀಸ್ ಸ್ಟೇಷನ್ನಿನಿಂದ ಬಂದ

ರಹೀಂ ಸಾಬಿ ಇವರ ಹಿಂದೆಯೆ ಬಂದು ರಾಮು ಗುಡಿಸಿಲನ್ನು ಸೇರಿದೊಡನೆ ತಾನೂ ಅವರಿಬ್ಬರ ಹಿಂದೆ ಗುಡಿಸಿಲಿನಲ್ಲಿ ಪ್ರವೇಶಿಸಿ "ರಾಮು, ನಿನ್ನೊಡನೆ ಮಾತನಾಡಬೇಕು" ಎಂದ.

ಖಾಕಿಬಟ್ಟೆಯನ್ನು ಕಂಡರೆ ರಾಮುನಿಗೆ, ಹೋರಿಗೆ ಕೆಂಪುಬಟ್ಟೆ ಕಂಡ ಹಾಗೆ. ಸ್ವಲ್ಪ ಸಿಟ್ಟುಗೊಂಡೇ "ಏಕೆ?" ಎಂದ.

"ನಿನ್ನೆಯ ಸಾಯಂಕಾಲ ನೀನು ಜಹಗೀರ್‌ದಾರರ ಮನೆಗೆ ಕೆಲಸಕ್ಕೆ ಹೋಗಿದ್ದೆಯಾ?"

"ಹೌದು, ಕಂಟ್ರಾಕ್ಟರು ಕಳುಹಿಸಿದ್ದರು."

"ಅವರ ಮನೆ ಎಷ್ಟು ಹೊತ್ತಿಗೆ ಬಿಟ್ಟೆ?"

"ಮಧ್ಯಾಹ್ನ ನಾಲ್ಕು ಗಂಟೆ ಹೊತ್ತಿನಲ್ಲಿ!"

"ಇಲ್ನೋಡು, ನೀನು ಕೂಲಿ ಕೆಲಸ ಮುಗಿಸಿಕೊಂಡು ನಾಲ್ಕು ಗಂಟೆ ಸಮಯದಲ್ಲಿ ಮನೆ ಬಿಡುವಾಗ, ಅವರ ಮನೆಯಲ್ಲಿ ಮೇಜಿನ ಮೇಲೆ ಆಗ ತಾನೆ ಅಂಗಡಿಯವನು ತಂದಿಟ್ಟು ಹೋಗಿದ್ದ ನೀಲಿ ಜರತಾರಿ ಸೀರೆ ಮಾಯ ವಾಗಿದೆಯೆಂದು ನಿನ್ನೆ ಸಂಜೆಯೆ ನಮಗೆ ಸ್ಟೇಷನ್ನಿಗೆ ವರ್ತಮಾನ ಬಂತು." —ರಹೀಂ ಸಾಬಿ ಚೆನ್ನಮ್ಮ ಉಟ್ಟಿದ್ದ ಸೀರೆಯನ್ನು ನೋಡಿ ನಸುನಕ್ಕ.

ಚೆನ್ನಿಯ ಮುಖ ಜೋಲು ಬಿತ್ತು. ರಾಮುನ ಮೈ ಬೆವರಿಟ್ಟಿತು. ಅವ ನಿಗೆ ಬಹಳ ಕೋಪ ಬಂತು.

"ನಾನು ಕಳವು ಮಾಡೋದಿಲ್ಲಾ ಅಂತ ನೀವೆಲ್ಲಾ ತಿಳಿದುಕೊಂಡಿ ದ್ದರೂ ಸತಾಯಿಸುತ್ತೀರಾ? ನಾನು ಜಹಗೀರ್‌ದಾರರ ಮನೆಯ ಸೀರೆ ಕದೀ ಲಿಲ್ಲ. ಈ ಸೀರೆ ನನ್ನದು; ನಿನ್ನೆ ಮಧ್ಯಾಹ್ನ —" ಎಂದು ಹೇಳು ತ್ತಿದ್ದವನು ಹಠಾತ್ತಾಗಿ ನಿಲ್ಲಿಸಿಬಿಟ್ಟು, ಚೆನ್ನಮ್ಮನ ಕಡೆ ನೋಡಿದ. ಅವಳು ಬಿಕ್ಕಿಬಿಕ್ಕಿ ಅಳುವುದೊಂದೇ ಬಾಕಿ. ಎರಡೂ ಕಣ್ಣಿನ ರೆಪ್ಪೆ ಕಣ್ಣೀರಿನ ನದಿಗೆ ಅಣೆ ಕಟ್ಟಿದ್ದವು. ರಾಮು ಒಂದೆರಡು ನಿಮಿಷ ಚೆನ್ನಮ್ಮನ ಮುಖವನ್ನು ನೋಡಿದ. ಅನಂತರ ಶಾಂತಚಿತ್ತನಾಗಿ ಚೆನ್ನಮ್ಮನ ಬಳಿ ಬಂದು ಅವಳ ಕೈಗಳೆರಡನ್ನೂ ಹಿಡಿದುಕೊಂಡು, "ಹೌದು ಚೆನ್ನಿ ನಿಜ, ತಪ್ಪಾಯ್ತು. ಅದು ಭಾರೀ ಸೀರೆ. ನೂರು ರೂಪಾಯಿ ಮೇಲಾಗುತ್ತದೆ, ನೀನು ಈಗ ಉಟ್ಟಿರುವ

ಸೀರೆ! ಅಂಥ ಸೀರೆ ನಿನಗೂ ಉಡಿಸೋಣ ಎಂದು ಹೀಗೆ ಮಾಡಿದೆ. ನಾನು ಈಗ ಸ್ಟೇಷನ್ನಿಗೆ ಹೋಗಬೇಕು. ಆಮೇಲೆ ಪೋಲೀಸಿನವರನ್ನು ಇಲ್ಲಿಗೆ ಕಳುಹಿಸುತ್ತಾರೆ. ಅವರೊಡನೆ ಸೀರೇಸ ಜೋಪಾನವಾಗಿ ತೆಗೆದಿಟ್ಟು ಕಳುಹಿಸು" ಎಂದು ರಹೀಂಸಾಬಿಯು ಜತೆಗೆ ಸ್ಟೇಷನ್ನಿಗೆ ಹೋಗಲು ಸಿದ್ಧನಾದ.

ಅಷ್ಟು ಹೊತ್ತಿಗೆ ಹೊರಗಡೆ "ರಾಮಾ" ಎಂದು ಯಾರೋ ಅಧಿಕಾರ ವಾಣಿಯಲ್ಲಿ ಕೂಗಿದರು. ಕಂಟ್ರಾಕ್ಟರು! ರಾಮು ಅವರಲ್ಲೇ ಕೆಲಸಕ್ಕೆ ಇದ್ದದ್ದು. ಅವರ ಧ್ವನಿ ಕೇಳಿದೊಡನೆಯೆ, ಅವರು ಅಲ್ಲಿಗೆ ಬಂದದ್ದು ತನಗೆ ಇಷ್ಟವಿಲ್ಲವೆಂಬುದನ್ನು ರಾಮು ತನ್ನ ಮುಖದಲ್ಲಿ ಸೂಚಿಸಿದ. ಸೂಕ್ಷ್ಮದೃಷ್ಟಿಯವನಾದ ರಹೀಂ ಸಾಬಿ ಅದನ್ನು ಗಮನಿಸಿ, ವಿಷಯಗಳನ್ನು ಸರಿಯಾಗಿ ತಿಳಿದುಕೊಳ್ಳುವುದಕ್ಕಾಗಿ ಕಂಟ್ರಾಕ್ಟರನ್ನು ಒಳಗೆ ಬರಹೇಳಿದ. ಅವರು ಒಳಗೆ ಬಂದು ರಹೀಂ ಸಾಬಿಯನ್ನು ನೋಡಿ, ಅವನು ಅಲ್ಲಿಗೇಕೆ ಬಂದನೆಂದು ವಿಚಾರಿಸಿದರು.

ರಹೀಂ ಸಾಬಿ, ದೊಡ್ಡ ಕಳ್ಳನನ್ನು ಪತ್ತೆಮಾಡಿದವನಂತೆ ಹೆಮ್ಮೆಯಿಂದ "ರಾಮು ಕಳ್ಳತನವನ್ನು ಮಾಡುವುದಿಲ್ಲವೆಂದು ಕೂಲಿ ಕೆಲಸಕ್ಕೆ ಸೇರಿ ಮಂಕುಬೂದಿ ಚೆಲ್ಲುತ್ತಿದ್ದ. ಈಗ ಸಿಕ್ಕಿ ಬಿದ್ದ" ಎಂದ.

ಕಂಟ್ರಾಕ್ಟರೂ ಅಚ್ಚರಿಗೊಂಡು "ಹೇಗೆ?" ಎಂದರು.

ರಹೀಂಸಾಬಿ ನಸುನಗುತ್ತಾ ಚಿನ್ನಮ್ಮ ಉಟ್ಟಿದ್ದ ಸೀರೆಯನ್ನು ಕಂಟ್ರಾಕ್ಟರಿಗೆ ತೋರಿಸಿ "ಅದು ನೋಡಿ. ಅದು ಯಾರದು ಗೊತ್ತೆ?" ಎಂದ.

ಕಂಟ್ರಾಕ್ಟರು ರಹೀಂಸಾಬಿಯ ಅರ್ಥವನ್ನು ಗ್ರಹಿಸದೆ, "ಹೌದು ಗೊತ್ತು! ನಾನೇ ನಿನ್ನೆ ಸಂಜೆ ಐದು ಗಂಟೆಯಲ್ಲಿ—" ಎಂದು ಮುಂದೆ ಹೇಳುತ್ತಿದ್ದರು. ರಾಮು ಎಲ್ಲವನ್ನೂ ಕಳೆದುಕೊಂಡವನಂತೆ ಗಟ್ಟಿಯಾಗಿ ನಿಟ್ಟುಸಿರು ಬಿಟ್ಟು 'ಹುಶ್' ಎಂದು ತಡೆದ. ಕಂಟ್ರಾಕ್ಟರಿಗೆ ಏನೊಂದೂ ಅರ್ಥವಾಗದೆ ಮುಂದುವರಿದರು. "ಐದು ಗಂಟೆಯಲ್ಲಿ ಈ ಖೋಟಾ ಜರತಾರಿ ಸೀರೇಸ ತಿಮ್ಮಪ್ಪಯ್ಯನ ಅಂಗಡಿಯಲ್ಲಿ ಐದೂವರೆಗೆ ಕೊಡಿಸಿದೆ" ಎಂದರು.

ರಹೀಂಸಾಬಿ ಚಕಿತನಾಗಿ, "ಮತ್ತೆ ಜಹಗೀರ್‌ದಾರರ ಮನೆ ಜರತಾರಿ ಸೀರೆ?" ಎಂದು ಕೇಳಿದ.

ಕಂಟ್ರ್ಯಾಕ್ಟರಿಗೆ ಆಗ ಎಲ್ಲವೂ ತಿಳಿದು, ರಹೀಂಸಾಬಿಯ ಅನುಮಾನಕ್ಕೆ ಗಟ್ಟಿಯಾಗಿ ನಕ್ಕು, "ಛೀ ! ಛೀ ! ರಾಮು ಕದಿಯುವವನಲ್ಲ; ಇದು ಜಹಗೀರ್‌ದಾರರ ಮನೆ ಸೀರೆಯಲ್ಲ. ಅವರೂ ಮೊದಲು ಸೀರೆ ಕಳುವಾಯ್ತು ಅಂತ ತಿಳಿದುಕೊಂಡು ನನಗೂ ಹೇಳಿ ಕಳುಹಿಸಿದ್ದರು .... ಪೋಲೀಸಿಗೆ ವರ್ತಮಾನ ಕೊಟ್ಟಮೇಲೆ. ಆಮೇಲೆ ನಾನೂ ಅವರ ಮನೆಗೆ ಹೋಗಿದ್ದೆ. ಅವರಲ್ಲಿ ಸೀರೆ ಸಿಕ್ಕಿತ್ತು. ಅಮ್ಮಾವರ ಟ್ರಂಕಿನ ಹಿಂದೆಯೇ ಬಿದ್ದಿತ್ತು. ಬಹುಶಃ ಅವರು ಪುನಃ ಸ್ಟೇಷನ್ನಿಗೆ ಹೇಳಿ ಕಳುಹಿಸಲಿಲ್ಲವೇನೋ" ಎಂದು ವಿಷಯ ನಿರೂಪಣೆಮಾಡಿ ರಾಮುನಿಗೆ ಮರುದಿವಸ ಬೆಳಿಗ್ಗೆ ಮಾಡಬೇಕಾಗಿದ್ದ ಕೆಲಸ ತಿಳಿಸಿ, ರಹೀಂಸಾಬಿಯೊಂದಿಗೆ ಹೊರಟು ಹೋದರು.

ಚೆನ್ನಮ್ಮನ ಮುಖ ಪುನಃ ಅರಳಿತ್ತು. ಆದರೆ ಈಗ ಕಣ್ಣುಗಳ ರೆಪ್ಪೆಗಳಿಗೆ ಆನಂದಬಾಷ್ಪಗಳನ್ನು ತಡೆಕಟ್ಟುವ ಶಕ್ತಿ ಇರಲಿಲ್ಲ. ಹೊರಗಿನವರು ಮರೆಯಾದ ಕೂಡಲೆ ರಾಮನ ಕಡೆಗೆ ನೆಗೆದು, ಅವನನ್ನು ತಬ್ಬಿಕೊಂಡು "ರಹೀಂಸಾಬಿ ಕೇಳಿದಾಗ ನೀನು ತಪ್ಪನ್ನು ಒಪ್ಪಿಕೊಂಡು ಶಿಕ್ಷೆಯನ್ನನುಭವಿಸಲು ಸಿದ್ಧನಾದ್ದು ಏತಕ್ಕೆ ?" ಎಂದು ಕೇಳಿದಳು.

ರಾಮು ನಸುನಕ್ಕು, ಒಂದು ಕೈಲಿ ಚೆನ್ನಿಯ ನಡುವನ್ನು ಸುತ್ತಿ ಮತ್ತೊಂದರಿಂದ ಅವಳ ಗಲ್ಲ ಹಿಡಿದು ಮುಖವನ್ನೆತ್ತಿ "ನೋಡು ಚೆನ್ನಿ, ನಾನು ನಿನಗೆ ಐದೂವರೆ ರೂಪಾಯಿಯ ಖೋಟಾ ಜರತಾರಿ ಸೀರೆ ತಂದು ಐವತ್ತು ರೂಪಾಯಿಯ ನಿಜವಾದ ಜರತಾರಿ ಸೀರೆ ಎಂದು ಸುಳ್ಳು ಹೇಳಿ, ನಿನಗೆ ಭಾರಿ ಜರತಾರಿ ಸೀರೆ ಉಟ್ಟಿದ್ದ ತೃಪ್ತಿಯನ್ನುಂಟು ಮಾಡಬೇಕೆಂದು ಲೆಕ್ಕ ಹಾಕಿದ್ದೆ. ರಹೀಂಸಾಬಿ ಬಂದಾಗ ಅವನ ಎದುರಿಗೆ ನಿಜ ಹೇಳಿದ್ದರೆ ನಿನ್ನ ನಂಬಿಕೆ ಕೆಡುತ್ತಿತ್ತು. ನೀನುಟ್ಟಿದ್ದ ಸೀರೆ ನಿಜವಾದ ಜರತಾರಿಯದಲ್ಲಾ....ಅಂತ ನಿನಗೆ ತಿಳಿಯುಲೇ ಬಾರದು ; ಆದರ ಬದಲು ಒಂದು ತಿಂಗಳು ಜೈಲು ಅನುಭವಿಸಿದರೂ ಸೈ, ಎಂದು ಹಾಗೆ ಹೇಳಿದೆ" ಎಂದ.

———:———

---

"Vanity and some sobles" ಎಂಬ ಕಥೆಯ ಅನುವಾದ.

# ಪ್ರೇಮೋಪಾಸಕರು

ಗರ್ ಎಂದು ಶಬ್ದಮಾಡಿ ಅನಂತರ ಠಣ್ ಎಂದು ಗಂಟೆ ಹೊಡೆಯಿತು ....

ಕಿಟಕಿ ಬಳಿ ಕುಳಿತುಕೊಂಡು ಕೃಷ್ಣಮೂರ್ತಿಯ ಆಗಮನವನ್ನು ನಿರೀಕ್ಷಿಸುತ್ತಿದ್ದ ಸುಧಾ ಗಡಿಯಾರವನ್ನು ನೋಡಿದಳು ....

ಒಂದೂವರೆ ಗಂಟೆ! ಬೆಳಗ್ಗೆ ಎಂಟು ಗಂಟೆಗೆ ಒಂದು ಲೋಟ ಕಾಫಿ ಕುಡಿದು ಎಂದಿನಂತೆ ಕೆಲಸದ ಬೇಟೆಗೆ ಹೊರಟಿದ್ದ ಕೃಷ್ಣಮೂರ್ತಿ ಹಿಂದಿರುಗಿ ಬರುವ ಸುಳಿವು ಇನ್ನೂ ಕಾಣಬರಲಿಲ್ಲ. ಅಯ್ಯೋ! ಇನ್ನು ಎಷ್ಟು ದಿವಸ ತನ್ನ ಪ್ರೇಮದ ಮೂರ್ತಿ ಹೀಗೆ ಕೆಲಸಕ್ಕಾಗಿ ಅಲೆಯಬೇಕು? ಅವರಲ್ಲಿದ್ದ ಕಟ್ಟಕಡೆಯ ರೂಪಾಯನ್ನು ಮುರಿಸಿ ಆ ದಿವಸ ಅಡಿಗೆ ಸಾಮಾನನ್ನು ತರಿಸಿದ್ದಾಗಿತ್ತು; ನಾಳೆ?....

ಸುಧೆ ಗೋಡೆಗೆ ತಗಲಿಹಾಕಿದ್ದ ಕೃಷ್ಣಮೂರ್ತಿಯ ತಸ್ವೀರನ್ನು ತೆಗೆದುಕೊಂಡು ಬಂದು ಕಿಟಕಿಯ ಬಳಿ ಪುನಃ ಕುಳಿತಳು.... ಕೃಷ್ಣಮೂರ್ತಿಯ ಚಿತ್ರವನ್ನು ಕಣ್ಣುತುಂಬಾ ನೋಡಿದಳು. ಅವನದು ಗಂಡು ಮುಖ; ತುಟಿಗಳ ಮೇಲೆ ತೇಲುತ್ತಿದ್ದ ನಸುನಗೆ; ಅದು ಅವನ ಸ್ವಭಾವ. ತಸ್ವೀರನ್ನು ತೆಗೆಸಿಕೊಂಡಾಗ, ಅಂದರೆ ಎರಡು ವರ್ಷಗಳ ಹಿಂದೆ, ಅವನು ಸಿಮೆಂಟು ಕಾರ್ಖಾನೆಯಲ್ಲಿ ಇಂಜಿನಿಯರಾಗಿ ಇನ್ನೂರಾ ಐವತ್ತು ರೂಪಾಯಿ ಸಂಬಳದಲ್ಲಿ ತನ್ನ ವೃತ್ತಿಯನ್ನಾರಂಭಿಸಿದ್ದ. ಆ ಕಾರ್ಖಾನೆಯವರು ಈಗ ಒಂಬತ್ತು ತಿಂಗಳ ಕೆಳಗೆ ದಿವಾಳಿ ಏಳದೆ ಇದ್ದಿದ್ದರೆ ಕೃಷ್ಣಮೂರ್ತಿಗೆ ಈಗ ಮುನ್ನೂರಾ ಐವತ್ತು ರೂಪಾಯಿ ಸಂಬಳ ಇರುತ್ತಿತ್ತು. ಕೃಷ್ಣಮೂರ್ತಿಯ ತಸ್ವೀರನ್ನು

ಮುಖಮಲ್ ಬಟ್ಟೆಯ ಮೇಲೆ ಸುಧಾ ತಾನೇ ನೆಯ್ದಿದ್ದ ಹೂಗೊಂಚಲಿನ ಸರ ಗಳ ಮಧ್ಯೆ ಅಂಟಿಸಿ ಮೇಲ್ಗಡೆ 'ಕೃಷ್ಣಮೂರ್ತಿ ಬಿ.ಇ.' ಎಂದೂ ಕೆಳಗಡೆ 'ಸುಧಾ' ಎಂದೂ ಅವರಿಬ್ಬರ ಹೆಸರುಗಳನ್ನೂ ನೇಯ್ದು ಕಟ್ಟು ಹಾಕಿಸಿದ್ದಳು. ಈಗ ಒಂಭತ್ತು ತಿಂಗಳಿಂದ ಅವರ ಅದೃಷ್ಟ ಬದಲಾಯಿಸಿತ್ತು. ಕೆಲಸ ಹೋದ ಆರು ತಿಂಗಳವರೆಗೆ, ತಾವು ಮೊದಲು ವಾಸವಾಗಿದ್ದ ಸಣ್ಣ ಬಂಗಲೆ ಯಲ್ಲೇ ಇದ್ದು ಹಿಂದೆ ಗಳಿಸಿಟ್ಟ ಹಣದಿಂದ ಜೀವನ ಸಾಗಿಸಿದ್ದರು. ಇನ್ನೊಂದು ಕೆಲಸ ಸಿಗುವುದು ಇಷ್ಟು ಕಠಿನವೆಂದು ಕೃಷ್ಣಮೂರ್ತಿ ಎಣಿಸಿಯೇ ಇರಲಿಲ್ಲ. ಅವರಲ್ಲಿದ್ದ ಹಣವೆಲ್ಲವೂ ಮಾಯವಾದ ಮೇಲೆ ದಂಪತಿಗಳು ಎಚ್ಚತ್ತರು. ಕೆಲಸ ಸಿಗುವ ಸಂಭವ ಇನ್ನೂ ಕಾಣಬರಲೇ ಇಲ್ಲ. ಮನೆ ಬದಲಾಯಿಸಿ, ತಿಂಗಳಿಗೆ ಹತ್ತು ರೂಪಾಯಿ ಬಾಡಿಗೆಗೆ ಐದನೇ ಮಹಡಿಯ ಮೇಲಿದ್ದ ಎರಡು ಕೊಠಡಿಗಳನ್ನು ಬಾಡಿಗೆಗೆ ತೆಗೆದುಕೊಂಡರು. ಮನೆಯ ಮಾಲೀಕ ದಯ ಮಾಡಿ ಬಿಟ್ಟಿದ್ದ ಒಂದು ಕುರ್ಚಿಯ ವಿನಾ ಅಲ್ಲಿ ಇತರೇ ಹೆಚ್ಚಿನ ಸಾಮಾನು ಒಂದೂ ಇರಲಿಲ್ಲ. ಹಿಂದೆ ಅವರು ಕೊಂಡಿದ್ದ ಸುಖೋಪಕರಣಗಳನ್ನೆಲ್ಲಾ ವಿಕ್ರಯಿಸಿದರು. ಸುಧೆಗೆ ಬಹಳ ಇಷ್ಟವಾಗಿದ್ದ ಪಿಟೀಲು, ವೀಣೆ; ಕೃಷ್ಣ ಮೂರ್ತಿಯ ಪ್ರಾಣವೆನಿಸಿದ್ದ ಹೆಚ್ಚು ಬೆಲೆ ಬಾಳುತ್ತಿದ್ದ ನಾಯಿ - ಕಂಬನಿ ಯಿಳಿಸಿ ಕೈಬಿಟ್ಟಿದ್ದವು .... ಹೋದ ವಾರ ಕೃಷ್ಣಮೂರ್ತಿಯ ಸರ್ಜ್‌ಸೂಟು ವಿಕ್ರಯವಾಗಿ ಅದರಿಂದ ಬಂದ ಕಡೆಯ ರೂಪಾಯೂ ಇಂದು ಮಾಯ ವಾಗಿತ್ತು....ಮುಂದೆ ?

ಸುಧೆಯ ಕಣ್ಣುಗಳಲ್ಲಿ ನೀರು ತುಂಬಿತು. ಕೃಷ್ಣಮೂರ್ತಿಗೆ ಬಹಳ ಕಷ್ಟಕಾಲ ಬಂದಿದ್ದರೂ ಪ್ರತಿನಿತ್ಯವೂ ಸುತ್ತಿ ಸುತ್ತಿ ಬೇಸತ್ತು ಬರುತ್ತಿದ್ದರೂ, ಒಂದು ದಿನವಾದರೂ ಸುಧೆಗೆ ಅವನು ಒಂದಾದರೂ ಮನನೋಯುವ ಮಾತನ್ನು ಅವನು ನುಡಿದಿರಲಿಲ್ಲ .... ಒಬ್ಬರನ್ನೊಬ್ಬರು ಅಷ್ಟು ಪ್ರೀತಿಸು ತ್ತಿದ್ದರು. ಹೊಸದಾಗಿ ಅವರು ಸಂಸಾರ ಹೂಡಿದಾಗ ಕೃಷ್ಣಮೂರ್ತಿ ಸುಧೆಗೆ,

"ಕಷ್ಟ ಸುಖ ಏನ್ ಬಂದ್ರೂನೆ
ನಿಂಗೆ ನಾನೆ, ನಂಗೆ ನೀನೆ
ಮುಳುಗೋಕೆ ಬೆನ್ನಿಗ್ ಬೆಂಡಿದ್ದಂಗೆ
ನಿಂಗ್ ನೆಪ್ಪಿರಲಿ ನಂಜಿ"

ಎಂಬ ಪದ್ಯ ಓದಿಹೇಳಿದ್ದ. ವಾಸ್ತವವಾಗಿ ಇಬ್ಬರೂ ಹಾಗೆಯೆ ಇದ್ದರು. ಆ ಪದ್ಯವನ್ನು ಕೃಷ್ಣಮೂರ್ತಿ ಎಷ್ಟೋ ವೇಳೆ ಸಂಜೆಗೆ ವಿನೋದ ವಾಗಿ ಹಾಡಿದ್ದ. ಆಗ ಸುಧೆ ಪಿಟೀಲಿನಲ್ಲಿ ಅದನ್ನು ಅನುಸರಿಸಿದ್ದಳು.

* * * *

ಥಡ್....ಥಡ್....

ಸುಧೆ ಬಹುಬೇಗನೆ ಕೃಷ್ಣಮೂರ್ತಿಯ ಚಿತ್ರವನ್ನು ಮತ್ತೆ ಮೊಳೆಗೆ ನೇತುಹಾಕಿ ಕಿಟಕಿಯ ಬಳಿ ಬಂದು ನಿಂತು ಶಬ್ದವನ್ನು ಆಲೈಸಿ ಕೇಳಿದಳು.

ಥಡ್....ಥಡ್....ಥಡ್....

ಭಾರವಾದ ಶಬ್ದ....ಶಬ್ದ ಹತ್ತಿರ ಹತ್ತಿರ ಬಂದಂತೆಲ್ಲಾ ಸುಧೆಗೆ ಹೆಚ್ಚು ಹೆಚ್ಚು ನಿರಾಶೆಯಾಯಿತು. ಕೆಲಸ ಸಿಕ್ಕಿದ್ದರೆ ಕೃಷ್ಣಮೂರ್ತಿ ಹಾಗೆ ನಿಧಾನ ವಾಗಿ ಮೆಟ್ಟಲು ಮೆಟ್ಟಿ ಬರುತ್ತಿರಲಿಲ್ಲ. ಸಂತೋಷ ವಾರ್ತೆಯನ್ನು ಸುಧೆಗೆ ಬೇಗ ತಿಳಿಸಬೇಕೆಂದು ಹಗುರವಾಗಿ ನೆಗೆನೆಗೆದು ಬರುತ್ತಿದ್ದ .... ಮೆಲ್ಲನೆ ಕಿರ್ರೆಂದು ಬಾಗಿಲು ತೆರೆಯಿತು .... ಕೃಷ್ಣಮೂರ್ತಿಯ ಮುಖವನ್ನು ನೋಡಿ ದೊಡನೆ ಸುಧೆಯ ನಿರಾಶೆ ಸಂಪೂರ್ಣವಾಯಿತು.

ಕೃಷ್ಣಮೂರ್ತಿ ಒಳಗೆ ಬಂದು ಟೋಪಿಯನ್ನು ಒಂದು ಮೊಳೆಗೆ ತಗ ಲಿಸಿ ಅಂಗಿಯ ಗುಂಡಿ ಬಿಚ್ಚುತ್ತಾ ಕುರ್ಚಿಯ ಮೇಲೆ ಹುಷ್ ಎಂದು ಕುಳಿತ. ಬಿಸಿಲಿನಲ್ಲಿ ಅಲೆದಲೆದು ಮುಖ ಕಂದಿತ್ತು; ಧೂಳು ಮುಚ್ಚಿತ್ತು; ಕೂದಲು ಕೆದರಿತ್ತು. ಬೆವರಿನ ಹನಿ ಮುಖದ ಮೇಲೆ ಗೀರು ಕೊರೆದಿದ್ದವು. ಆ ದಿವಸ ಅವರಲ್ಲಿದ್ದ ಕಡೆಯ ರೂಪಾಯಿ ಮುರಿಸಿ ಸಾಮಾನು ತಂದಿದ್ದರಿಂದ ಹಿಂದಿರುಗಿ ಬರುವಾಗ ಎಂದಿನಂತೆ 'ಟ್ರಾಂ'ನಲ್ಲಿ ಬರಲು ಒಂದು ಆಣೆಯೂ ಇರಲಿಲ್ಲ. ಕೃಷ್ಣಮೂರ್ತಿ ಟವಲಿನಿಂದ ತನ್ನ ಮುಖ ಒರಸಿಕೊಂಡು ಸುಧೆಯ ಮುಖದಲ್ಲಿ ಕಾಣಬರುತ್ತಿದ್ದ ದುಃಖ, ಭೀತಿ, ನಿರಾಶೆಗಳನ್ನು ಗಮನಿಸಿ ನಕ್ಕ. ಕಾರ್ಮೋಡಗಳ ಸಮೂಹದಲ್ಲಿ ಮಿಂಚು ತೂರಿಬಂದು ವಿಶ್ವವನ್ನೇ ಬೆಳಗಿಸು ವಂತೆ ಎಂಥ ಕಷ್ಟಸಮೂಹಗಳಲ್ಲೂ ಕೃಷ್ಣಮೂರ್ತಿಗೆ ನಸುನಗೆ ತೂರಿಬಂದು ಮುಖದ ಮೇಲೆ ಅರಳಿ ಅವರ ಜೀವನವನ್ನು ಬೆಳಗಿಸುತ್ತಿತ್ತು.

"ಇದೇನು ಸುಧಾ, ರಾವಣನ ಕೈಲಿ ಸಿಕ್ಕ ಸೀತೆಯಂತೆ ಕಾಣು ತ್ತೀಯೆ ?" ಎಂದ.

ದುಃಖ ಉಕ್ಕಿ ಬಂದು, ಕಂಠ ಬಿಗಿದು, ಮಾತು ಗಂಟಲಲ್ಲೇ ಸೆರೆಸಿಕ್ಕಿ ಕಳಚಿ ಬೀಳುವವಳಂತೆ ಸುಧಾ ಕೃಷ್ಣಮೂರ್ತಿಯ ಎದೆಗೆ ಜೋಲಿಬಂದು, ಕುರ್ಚಿಯ ಕೈಮೇಲೆ ಕುಳಿತು, ಅವನ ಹೆಗಲಮೇಲೆ ಮುಖವನ್ನಿಟ್ಟು, ದುಃಖ ತಡೆಯಲಾರದೆ ಬಿಕ್ಕಿ ಬಿಕ್ಕಿ ಅತ್ತಳು. ಕೃಷ್ಣಮೂರ್ತಿ ಅವಳ ನಡುವನ್ನು ಒಂದು ಕೈಯಿಂದ ಸುತ್ತಿ, ಇನ್ನೊಂದು ಕೈಯಿಂದ ಅವಳ ತುರುಬನ್ನು ನೇವರಿಸುತ್ತಾ "ಹೀಗೆ ಹೆದರಿದರೆ ಆಗುತ್ತೇಯೇ ಸುಧಾ; ನೀನೇ ನನ್ನನ್ನು ಹೆದರಿಸಿದರೆ ಏನು ಗತಿ? ಹೇಳಿಲ್ವೆ, ಮುಳುಗೋನ್ ಬೆನ್ನಿಗೆ ಬೆಂಡಿದ್ದಂಗೆ ಇರಬೇಕು" ಎಂದ.

ಅಳುವಿನ ಮಧ್ಯೆ ಸುಧೆ "ಬೆಂಡಲ್ಲಾ--ನಾನು—ನಿಮಗೆ........ಕಲ್ಲು"

"ಛೆ! ಛೆ! ನೀನಿದೀಯಾ ಎಂತ ನನಗೆ ಜೀವ ಇದೆ." ಎಂದು ಸಮಾಧಾನ ಮಾಡಿದ, ಕೃಷ್ಣಮೂರ್ತಿ.

ದುಃಖ ಶಮನವಾದ ಮೇಲೆ ಸುಧೆ ಮುಖವನ್ನು ಹಿಂದಕ್ಕೆತ್ತಿ, ಕೃಷ್ಣಮೂರ್ತಿಯ ಹೆಗಲುಗಳ ಮೇಲೆ ತನ್ನೆರಡು ಹಸ್ತಗಳನ್ನೂ ಲಘುವಾಗಿ ಇಟ್ಟು "ಕೆಲಸ ಸಿಗಲೇ ಇಲ್ವೆ" ಎಂದಳು.

"ಕೆಲಸಾನೂ ಇಲ್ಲಾ, ಬೊಗಸೇನೂ ಇಲ್ಲ. ಇನ್ನುಮೇಲೆ ಬೊಗಸೇನೇ ಪ್ರಾರಂಭ ಮಾಡಬೇಕು ಎಂತ ಕಾಣುತ್ತೆ."

"ಮುಂದೇನು ಗತಿ!"

"ಇವೊತ್ತು ಸಾಯಂಕಾಲ ಇನ್ನೊಂದು ಕಡೆ ಹೋಗಿ ಬರುತ್ತೇನೆ. ಅಲ್ಲಿ ಕೆಲಸ ಸಿಗಬಹುದು."

ಸುಧೆ ತನ್ನ ಕತ್ತನ್ನು ಸ್ವಲ್ಪ ಹಿಂದಕ್ಕೆ ಸೆಳೆದುಕೊಂಡು, ತಲೆಯನ್ನು ಕೊಂಚ ಓರೆಮಾಡಿ, ಅರಳಿದ ಕಣ್ಣುಗಳಿಂದ ಕೃಷ್ಣಮೂರ್ತಿಯ ಮುಖವನ್ನೇ ನೋಡುತ್ತಾ ಕುಳಿತುಬಿಟ್ಟಳು. ಈಚೀಚೆಗೆ ಸುಧೆಗೆ ಆ ಮುಖವನ್ನು ಎಷ್ಟು ನೋಡಿದರೂ ತೃಪ್ತಿ ಇರಲಿಲ್ಲ. ಮೊದಲಿನ ಸುಖಕಾಲಕ್ಕಿಂತಲೂ ಈಗ ಅವಳಿಗೆ ಅವನಲ್ಲಿ ಪ್ರೇಮ ಹೆಚ್ಚಾಗಿತ್ತು. ಈಚೆಗಂತೂ ಅವನು ಬೊಂಬಾಯಿ ನಗರವನ್ನೆಲ್ಲಾ ಸುತ್ತಾಡಿ, ಬೆಂದು ಬಳಲಿ ಹಸಿವು ಬಾಯಾರಿಕೆಗಳಿಂದ ಕಂಗೆಟ್ಟು, ಖಿನ್ನನಾಗಿ ಬಂದಾಗಲೆಲ್ಲಾ ಅವಳು ಹೃದಯ ಕರಗಿ ಪ್ರೇಮ

ನೂರ್ಮಡಿಯಾಗುತ್ತಿತ್ತು. ಅವರಿಗೆ ಒದಗಿದ್ದ ಆ ಕಷ್ಟಗಳ ಮಧ್ಯದಲ್ಲಿ ಅವರಿಬ್ಬರೂ ಹಾಗೇ ಕುಳಿತು ಒಬ್ಬರನ್ನೊಬ್ಬರು, ಗಾಢಪ್ರೇಮದಿಂದ ಮಾತಿನ ಅವಶ್ಯಕತೆಯೇ ಇಲ್ಲದೆ ಹೃದಯಗಳು ಒಂದಾಗಿ, ಆ ಪ್ರೇಮದ ಅದ್ಭುತ ಕಷ್ಟ ಗಳನ್ನು ಮರೆಯುತ್ತಿದ್ದ ಚಿತ್ರವನ್ನು ನೋಡಲು ಕಾಲವೂ ಸ್ವಲ್ಪ ಹೊತ್ತು ಮುಗ್ಧವಾಗಿ ಚಲಿಸದೆ ನಿಂತಿರುವಂತಿತ್ತು.

ಎಂದಿನಂತೆ ಆಸೆಯಿಟ್ಟು ನಾಳೆ ಏನಾದರೂ ಆದೀತೆಂದು ಊಟಕ್ಕೆ ಕುಳಿತರು. ಊಟಮಾಡುವಾಗ ಸುಧೆ ಹೆಚ್ಚು ಮಾತಿಲ್ಲದೆ ಮೌನವಾಗಿ ಏನೋ ಯೋಚಿಸುತ್ತಿದ್ದಳು. ಕೃಷ್ಣಮೂರ್ತಿ "ಏನು ಸುಧಾ, ಬಹಳ ಯೋಚನೆ ಮಾಡುತ್ತೀ" ಎಂದ.

ಸುಧೆ ಮೆಲ್ಲನೆ ಹೇಳಿದಳು—ಹಾಡಿದಳು ; ಮುಳುಗೋಕೆ ಜೆನ್ನಿಗೆ ಬೆಂಡಿಂದ್ದಂಗೆ."

"ಏನು ಬಾಯಿಪಾಠ ಮಾಡುತ್ತಿರೋ ಹಾಗಿದೆಯಲ್ಲಾ" ಎಂದು ಕೃಷ್ಣ ಮೂರ್ತಿ ಹೇಳಿದ. ಸುಧೆಯು ಉತ್ತರ ಕೊಡಲಿಲ್ಲ.

ಮಧ್ಯಾಹ್ನ ಮೂರುವರೆ ಗಂಟೆಗೆ ಎಂದಿನಂತೆ ಕೃಷ್ಣಮೂರ್ತಿ ಕೆಲಸದ ಯಾತ್ರೆಗೆ ಹೊರಟ—ಹೋಗುವಾಗ ತನ್ನ ಪೆಟ್ಟಿಗೆಯಲ್ಲಿ ಬಿದ್ದಿದ್ದ ಹಳೆಯ ಕಾಗದಗಳ ಕಟ್ಟನ್ನು ತೆಗೆದುಕೊಂಡು ಹೋದ.

* * * * *

ಸಾಯಂಕಾಲ ಎಂಟು ಗಂಟೆಗೆ ಹಿಂದಿರುಗಿ ಬಂದಾಗ ಕೃಷ್ಣಮೂರ್ತಿ ಸುಧೆಯ ಮುಖದಲ್ಲಿ ಒಂದು ಬಗೆಯ ಸಂತಸದ ಬದಲಾವಣೆಯನ್ನು ಗಮನಿ ಸಿದ. ಸುಧೆ ಜಿಂಕೆಯಂತೆ ಕೃಷ್ಣಮೂರ್ತಿ ಬಳಿಗೆ ಚಿಮ್ಮಿ ಬಂದು "ನಾನು ಒಂದು ವಿಷಯ ಹೇಳ್ತೀನೆ. ಸಿಟ್ಟುಮಾಡಿಕೋ ಬಾರದು" ಎಂದಳು.

"ನಿನ್ನ ಮೇಲೆ ನಾನು ಎಂದು ಕೋಪ ಮಾಡಿದೇನೆ? ಇವತ್ತು ಹೀಗೆ ಕೇಳೋಕೆ."

"ನನ್ನಾಣೆ"

"ಹೂಂ. ನನ್ನ ಮೇಲಿನ ಆಣೆ."

"ಅಲ್ಲ. ನನ್ನ ಮೇಲೆ ಆಣೆ ಇಡಬೇಕು."

"ಆಗಲಿ, ನಿನ್ನಾಣೆ."

"ಇವತ್ತು ಮಧ್ಯಾಹ್ನ, ನೀವು ಹೋದಮೇಲೆ ಆ ಕಡೆ ರಾವ್ ಬಹದ್ದೂರರ ಮನೆಗೆ ಹೋಗಿದ್ದೆ. ಅವರು ಪೂನಾ ಕಡೆಯವರು. ಕರ್ಣಾಟಕ ಸಂಗೀತ ಕಲಿಯಬೇಕಂತೆ. ರಾವ್ ಬಹದ್ದೂರರ ಹೆಂಡತಿಗೂ ಹಿರೇ ಮಗಳಿಗೂ ಪಿಟೀಲು, ವೀಣೆ, ಸಂಗೀತ ಎಲ್ಲಾ ಹೇಳಿ ಕೊಡಬೇಕಂತೆ. ಬೆಳಿಗ್ಗೆ ಎಂಟು ಗಂಟೆಯಿಂದ ಹನ್ನೊಂದು ಗಂಟೆಯವರೆಗೆ. ತಿಂಗಳಿಗೆ ನಲ್ವತ್ತು ರೂಪಾಯಿ ಕೊಡುತ್ತಾರೆ. ನಾನು ಹೇಳಿಕೊಡೋದಕ್ಕೆ ಒಪ್ಪಿಕೊಂಡು ಬಂದೆ."

'ಛಿ! ಛಿ! ನೀನು ದುಡಿಯಬೇಕೆ ನನಗೋಸ್ಕರ?'

ಸುಧೆ ನಸುನಕ್ಕು ಹೇಳಿದಳು "ಮುಳುಗೋರ್‍ ಬೆನ್ನಿಗೆ ಬೆಂಡೆದ್ದಂಗೆ...."

ಮರುದಿವಸ ಒಂದು ಗಂಟೆಗೆ ಕೃಷ್ಣಮೂರ್ತಿ ಹಿಂದಿರುಗಿ ಬಂದಾಗ ಸುಧೆ ಐದು ರೂಪಾಯಿನ ನೋಟನ್ನು ತೋರಿಸಿ "ಇವತ್ತು 'ಸಾ ರೀ ಗಾ ಮಾ' ಪ್ರಾರಂಭ ಮಾಡಿಸಿ ಬಂದೆ. ಮುಂಗಡ ಐದು ರೂಪಾಯಿ" ಎಂದಳು. ದೊಡ್ಡ ಸಾಹುಕಾರರು ಸಣ್ಣ ನೋಟುಗಳನ್ನು ಎಸೆಯುವ ಠೀವಿಯಿಂದ ಕೃಷ್ಣಮೂರ್ತಿ ಒಂದು ಹತ್ತು ರೂಪಾಯಿ ನೋಟನ್ನು ಸುಧೆಯ ಕಡೆಗೆ ಎಸೆಯುತ್ತಾ 'ಇದನ್ನು ತೆಗೆದುಕೋ' ಎಂದು ಹೇಳಿದ.

ಸುಧೆ ಹರ್ಷಭರಿತಳಾಗಿ 'ಎಲ್ಲಿತ್ತು' ಎಂದಳು. 'ನಾನು ಇಂಗ್ಲಿಷ್‌ನಲ್ಲಿ ಪದ್ಯಗಳನ್ನೂ ಕಥೆಗಳನ್ನೂ ಬರೆದಿಟ್ಟಿರಲಿಲ್ಲವೆ? ನಿನ್ನೆ ಅದನ್ನು ತೆಗೆದುಕೊಂಡು ಹೋಗಿ ಟೈಮ್ಸ್ ಆಫೀಸಿನವರಿಗೆ ತೋರಿಸಿದೆ. ಸಂಪಾದಕರು ಅದನ್ನು ಓದಿ ಬಹಳ ಚೆನ್ನಾಗಿದೆ ಎಂದರು. ಅವರ ಕಛೇರಿಯಲ್ಲಿ ನನಗೆ ಐವತ್ತು ರೂಪಾಯಿ ಸಂಬಳದ ಕೆಲಸವನ್ನು ಕೊಟ್ಟರು. ಹನ್ನೊಂದರಿಂದ ಮಧ್ಯಾಹ್ನ ನಾಲ್ಕು ಗಂಟೆ ವರೆಗೆ, ಆಫೀಸಿನಲ್ಲಿ ನಾನು ಕೆಲಸ ಮಾಡಬೇಕು. ವಾರಕ್ಕೊಂದು ಕಥೆ ಬರೆದು ಕೊಡಬೇಕು" ಎಂದನು.

ಸುಧೆಗೆ ಮೇರೆ ಇಲ್ಲದ ಸಂತೋಷವಾಯಿತು. ಇನ್ನು ಕಷ್ಟದಿಂದ ಪಾರಾದೆವು ಎಂದುಕೊಂಡಳು.

ಅವರವರ ಹೊಸ ಕಲಾವೃತ್ತಿಗಳಿಗೆ ಅವರವರು ಮರುದಿನದಿಂದ ಕಾಲಕ್ಕೆ ಸರಿಯಾಗಿ ಹೋಗಲಾರಂಭಿಸಿದರು.

"ನೀನು ಪಿಟೀಲು ಚೆನ್ನಾಗಿ ಬಾರಿಸುತ್ತೀ? ಜೀವನಕ್ಕೆ ಅದರಿಂದ ಸಂಪಾದನೆ ಮಾಡಬಹುದು ಎಂದು ನಾವು ಹೇಳುತ್ತಿರಲಿಲ್ವೆ" ಎಂದ ಕೃಷ್ಣ ಮೂರ್ತಿ.

"ಹೌದು; ನಾನೂವೆ ನೀವು ಕಥೆ ಚೆನ್ನಾಗಿ ಬರೀತೀರಿ, ಅದರಿಂದ ದುಡ್ಡು ಸಂಪಾಧಿಸಬಹುದು ಎಂದು ಹೇಳುತ್ತಿರಲಿಲ್ವೆ"—ಎಂದು ಉತ್ತರ ಕೊಟ್ಟಳು ಸುಧಾ.

* * * *

ಹೀಗೆ ಕೆಲವು ದಿನ ಕಳೆದವು. ಒಂದು ದಿನ ರಾತ್ರಿ ಇಬ್ಬರೂ ಮಲ ಗಿರುವಾಗ, "ನೀವು ನಮ್ಮ ರಾವ್‌ಬಹದ್ದೂರ್‌ರರ ಮಗಳನ್ನು ನೋಡಬೇಕು ಅಂದ್ರೆ. ಈಗ ಜಂಟಿ ಸ್ವರ ಮುಗಿಸಿದೇನೆ. ನಾನು ಪಾಠ ಹೇಳಿಕೊಡೋ ದನ್ನ ಮೆಚ್ಚಿಕೊಂಡಿದಾರೆ ಅವರು" ಎಂದಳು ಸುಧಾ.

ಅವಳ ಜಡೆಯನ್ನು ತನ್ನ ಬೆರಳಿಗೆ ಸುತ್ತುತ್ತಾ ಕೃಷ್ಣಮೂರ್ತಿ "ನೀನು ನನ್ನ ಸಂಪಾದಕರನ್ನು ನೋಡಿದರೆ ಏನು ಹೇಳ್ತೀಯೋ, ನನ್ನ ಕಥೆಗಳನ್ನು ಅವರು ಮೆಚ್ಚಿಕೊಂಡಿದಾರೆ. ನನ್ನ ಹಾಗೆ ಯಾರೂ ಬರೆಯುವುದಿಲ್ಲವಂತೆ" ಎಂದ.

ಮರುದಿವಸ ಕೃಷ್ಣಮೂರ್ತಿ ಸಾಯಂಕಾಲ ಹಿಂದಿರುಗಿ ಬಂದಾಗ ಸುಧೆ ಎಂದಿನಂತೆ ಅವನಿಗಾಗಿ ಇದಿರು ನಿಂತಿರಲಿಲ್ಲ. ಹಾಸಿಗೆಯ ಮೇಲೆ ಮಲಗಿ ಮುಲಗುತ್ತಿದ್ದಳು. ಕೃಷ್ಣಮೂರ್ತಿ ಅವಳ ಬಳಿ ಕುಳಿತುಕೊಂಡು "ಏಕೆ ಮಲಗಿದೀಯೆ? ಏನಾಗುತ್ತೆ" ಎಂದು ಆದರದಿಂದ ಕೇಳಿದ.

"ಅದೇನೂ ಇಲ್ಲಾ ಅಂದ್ರೆ. ಇವತ್ತು ಮಧ್ಯಾಹ್ನ ನಾನು ಪಾಠ ಹೇಳಿ ಕೊಡುತ್ತಿರುವಾಗ ರಾವ್‌ಬಹದ್ದೂರರ ಮನೆಗೆ ಅವರ ಊರಿನವರು ಯಾರೋ ಬಂದರು. ಅವರಿಗೆ ಕಾಫೀ ಮಾಡೋದು ಚೆನ್ನಾಗಿ ಬರೋದಿಲ್ಲವಾದ್ದರಿಂದ, ನನಗೆ ಮಾಡಿಕೊಡ್ತೀರಾ ಎಂದು ಕೇಳಿದರು. ಆಗಲಿ ಎಂದು ನಾನು ಕಾಫೀ ಮಾಡೋದಕ್ಕೆ ಹೊರಟೆ. ಆ ಮರಳೋ ಸಾರು-ಹಾಳು ಅಲ್ಲ ನೀರು, ಕೈತಪ್ಪಿ

ನನ್ನ ಕೈಮೇಲೆಲ್ಲಾ ಚೆಲ್ಲಿ, ಬೊಬ್ಬೆ ಬಂತು. ಅವರೇ ಬಟ್ಟೆ ಕಟ್ಟಿ ಕಳುಹಿಲ್ಲಿದರು '' ಎಂದು ಸುಧೆ ಕೈಚಾಚಿ ತೋರಿಸಿದಳು.

ಅಂಗೈಯನ್ನು ಹಳದೀ ಬಣ್ಣದ ಬಟ್ಟೆಯಲ್ಲಿ ಕಟ್ಟಿದ್ದರು. ಬಟ್ಟೆಯ ಮೇಲೆ ಅಲ್ಲಲ್ಲಿ ನೀಲೀಮಸಿ ಚೆಲ್ಲಿತ್ತು.

ಕೃಷ್ಣಮೂರ್ತಿ ಆ ಕೈಯನ್ನು ತನ್ನೆರಡು ಕೈಗಳಿಂದಲೂ ಹಿಡಿದುಕೊಂಡು ನೋಡಿದ. ಮುಖ ನೀರವವಾಯಿತು. ಕಣ್ಣು ಅಲುಗಿಸದೆ ಬಹಳ ಹೊತ್ತು ಆ ಕೈಯನ್ನು ನೋಡುತ್ತಾ ಕಲ್ಲುಬೊಂಬೆಯಂತೆ ಕುಳಿತ. ತರುವಾಯ ಸುಧೆಯನ್ನು ಭೇದಿಸಿ ನೋಡುತ್ತಾ "ಸುಧಾ! ಪ್ರತಿನಿತ್ಯವೂ ಬೆಳಗ್ಗೆ ಎಂಟು ಗಂಟೆಗೆ ನೀನು ಎಲ್ಲಿಗೆ ಏನು ಕೆಲಸಕ್ಕೆ ಹೋಗುತ್ತೀಯೆ?" ಎಂದ.

"ರಾವ್‌ಬಹದ್ದೂರರ ಮನೆಗೆ ಪಾಠಕ್ಕೆ........

ಕೃಷ್ಣಮೂರ್ತಿ ತಲೆಯನ್ನಾಡಿಸಿ ನಸುನಕ್ಕ. ಸುಧೆಯ ಕಣ್ಣಸಿ ನೀರು ತುಂಬಿತು.

''ಹೌದು. ರಾವ್‌ಬಹದ್ದೂರರು, ಕಥೆ, ಸಂಗೀತ ಎಲ್ಲಾ ಸುಳ್ಳು ನಾನು ಸುಳ್ಳು ಹೇಳಿದೆ. ನಾರಾಯಣ ಪ್ರಸಾದರ ಮನೆಯಲ್ಲಿ ಒಪ್ಪೊತ್ತಿನ ಅಡಿಗೆ ಹೆಂಗಸು ಬೇಕು ಅಂತ ನನಗೆ ತಿಳಿಯಿತು. ನಾನು ಹೋಗಿ ಒಪ್ಪಿಕೊಂಡೆ. ಅಡಿಗೆ ಕೆಲಸ ಅಂತ ಹೇಳಿದರೆ, ನೀವು ಏನು ಅಂತೀರೋ ಏನೋ ಅಂತ ಸಂಗೀತದ ನೆವ ಹೇಳಿದೆ. ಆದರೆ ನನ್ನ ಕಥೆ ಸುಳ್ಳು ಆದರೂ ನೀವು ಚೆನ್ನಾಗಿ ಬರೆಯುವುದು ಸುಳ್ಳು ಅಲ್ವಲ್ಲ. ನಿಮ್ಮ ಕಥೆ ಯಾವುದಾದರೂ ಅಚ್ಚಾಯ್ತೆ?'' ಎಂದಳು.

ಕೃಷ್ಣಮೂರ್ತಿ ನಗುತ್ತಾ ಹೇಳಿದ: "ಕಥೆಯೂ ಇಲ್ಲ, ಅಚ್ಚೂ ಇಲ್ಲ. ನನ್ನ ಕಥೆ ಓದಿ ಸಂಪಾದಕರು ಇದರಿಂದ ಒಂದು ಲೋಟಾ ಕಾಫಿ ಕಾಸಬಹುದು, ನಿನ್ನ ಹೆಂಡತಿಗೆ ಕೊಟ್ಟರೆ ಉಪಯೋಗಿಸುತ್ತಾಳೆ' ಎಂದರು. ನಾನು ಅದನ್ನು ಅವರೆದುರಿಗೇ ಹರಿದು ಹಾಕಿ, ನಿಮ್ಮ ಹೆಂಡತಿಗೇ ಕೊಡಿ ಎಂದು ಹೇಳಿ ಅಲ್ಲಿಂದ ಮುಂದೆ ಹೊರಟೆ. ನಿನಗೆ ಸಂಗೀತದ ಕೆಲಸ ಸಿಕ್ಕಿದ್ದು ಎಷ್ಟು ನಿಜವೋ ನನಗೆ ಕಥೆ ಬರೆವ ಕೆಲಸ ಸಿಕ್ಕಿದ್ದೂ ಅಷ್ಟೇ ನಿಜ. ಅಲ್ಲಿಂದ ಕೆಲಸ ಹುಡುಕಿಕೊಂಡು ಮುಂದಕ್ಕೆ ಹೊರಟೆ. ನಾರಾಯಣ ಪ್ರಸಾದರ

ಮನೆಗೆ ಐದನೇ ಅಂತಸ್ತು ಕಟ್ಟಿಸುತ್ತಾರೆ ಅಂತ ಕೇಳಿದೆ. ಮೇಸ್ತ್ರಿ ಕೆಲಸ ಖಾಲೀ ಇತ್ತು. ಒಪ್ಪಿಕೊಂಡೆ. ಮೇಸ್ತ್ರಿ ಕೆಲಸ ಅಂತ ಹೇಳಿದರೆ ನಿನಗೆ ಮನಸ್ಸು ನೋಯುತ್ತೆ ಎಂದು ಊಹಿಸಿ, ನಿನ್ನಹಾಗೆ ನಾನೂ ಒಂದು ಢೋಂಗು ಬಿಟ್ಟೆ. ಇವತ್ತು ಹನ್ನೊಂದು ಗಂಟೆ ಹೊತ್ತಿನಲ್ಲಿ ಕೆಲಸಮಾಡುತ್ತ ಇರುವಾಗ ಕೆಳಗಡೆ ಅಡಿಗೆಯವಳು ಕೈಮೇಲೆ ಸಾರು ಚೆಲ್ಲಿಕೊಂಡಳು ಎಂದು ಪ್ರಸಾದರಿಗೆ ಯಾರೋ ಹೇಳಿದರು. ಅವರು ಒಳಗೆ ಬೀರೂನಲ್ಲಿ ಬಟ್ಟೆ ಇತ್ತಿ ಇದೆ ಕಳುಹಿಸಿ ಕೊಡಿ ಎಂದು ನನಗೆ ಹೇಳಿದರು. ಈ ಹಳದಿ ಬಟ್ಟೇನ ನಾನೇ ಕತ್ತರಿಸಿ ಕಳು ಹಿಸಿದೆ. ಕತ್ತರಿಸುವಾಗ ಅಲ್ಲೇ ಇದ್ದ ಮಸಿಕುಡಿಕೆ ಚೆಲ್ಲಿ ಬಟ್ಟೆ ಮಸಿ ಆಯ್ತು. ಅದೇ ಬಟ್ಟೆ ಇದು."

ಸುಮಾರು ಅರ್ಧ ಗಂಟೆಯ ಮೇಲೆ ಕೃಷ್ಣಮೂರ್ತಿಯ ಮನೆ ಮುಂದೆ ನಿಂತವರು ಆ ಪ್ರೇಮದ ದಂಪತಿಗಳು ಒಂದೇ ಹೃದಯದಿಂದ ಒಂದೇ ಧ್ವನಿ ಯಿಂದ ಸಂತಸದಿಂದ ಹಾಡುತ್ತಿದ್ದುದನ್ನು ಕೇಳಬಹುದಾಗಿತ್ತು.

"ಕಷ್ಟ ಸುಖ ಏನ್ ಬಂದ್ರೂನೆ
ನಿಂಗೆ ನಾನೆ ನಂಗೆ ನೀನೆ
ಮುಳುಗೋನ್ ಬೆನ್ನಿಂಗ್ ಬೆಂಡಿದ್ದಂಗೆ
ನಿಂಗ್ ನೆಪ್ಪಿರಲಿ ನಂಜಿ.'' —(ರತ್ನನ ಪದಗಳು)

---

"A Service of Love" ಎಂಬ ಕಥೆಯ ಅನುವಾದ.

# ವಿಚಿತ್ರ ವ್ಯಥೆ

ನಾರೀಹೃದಯ ? .... .... !

*　　*　　*

ಚಂದಣ್ಣನ ಹೆಂಡತಿ ಗಂಗೆ ಎದುರುಮನೆ ಶಾಂತಪ್ಪನ ಮನೆಗೆ ಬಂದಳು. ಶಾಂತಪ್ಪನ ಮಡದಿ ಸಿದ್ದವ್ವ ಅವಳ ಗೆಳತಿ. ಅವರಿಬ್ಬರಿಗೂ ಪ್ರತಿನಿತ್ಯವೂ ಈ ತರ ಎದುರುಮನೆ ಓಡಾಟ ಇದ್ದೇ ಇರುತ್ತದೆ.

"ಹ್ಯಾಗಿದೀನಿ ?"—ಗಂಗೆ ಹೆಮ್ಮೆಯಿಂದ ಸಿದ್ದವ್ವನ ಪರೀಕ್ಷೆಗೆ ತನ್ನ ಮುಖ ಎತ್ತಿ ಹಿಡಿದಳು. ಬಲಗಣ್ಣಿನ ಕೆಳಗೆ, ಕೆನ್ನೆಯ ಕಡೆ, ಏಟು ನೀಲಿ ಕಟ್ಟಿ ಬಾದಾಮಿ ಗಾತ್ರದ ಬೋರು ಬಂದಿತ್ತು. ಎಡಗೆನ್ನೆಯ ಮೇಲೆ ಮೂಡಿದ್ದ ಮೂರು ಬೆರಳಿನ ಗುರುತು ಇನ್ನೂ ಅಳಿಸಿರಲಿಲ್ಲ.

"ನನ್ನ ಗಂಡ ನನ್ನ ಬಡಿಯೋದಿಲ್ಲವ್ವಾ" ಸಿದ್ದವ್ವ ಗಂಗೆಗೆ ನೋವಾಗಬಾರದೆಂದು ತನ್ನ ಹೆಮ್ಮೆಯನ್ನು ಅಡಗಿಸಿಕೊಂಡೇ ಹೇಳಿದಳು.

ಗಂಗೆ ಕಿಲಕಿಲ ನಕ್ಕಳು. "ತಿಂಗಳಿಗೆ ಒಂದಾವರ್ತಿ ಆದ್ರೂ ಹೊಡೀದೇ ಇರೋ ಗಂಡ ನನಗೆ ಬ್ಯಾಡವ್ವ. ಹೊಡೀತಿದ್ರೆ ನಿನ್ನ ಯೋಚನೆ ಅವನಿಗಿರುತ್ತೆ, ನೋಡು. ನಿನ್ನೆ ರಾತ್ರಿ ನನ್ನ ಗಂಡ ನನಗೆ ಇಕ್ಕಿದ್ದು ಪ್ರೀತಿ ಮದ್ದಲ್ಲ. ಈಗಲೂ ತಲೆ ದಿವ್ ಅಂತಿದೆ. ಆದ್ರೇನಂತೆ. ಇವೊತ್ತಿನಿಂದ ಇನ್ನೊಂದು ತಿಂಗಳು ಹ್ಯಾಗಿರ್‍ತಾನೇ ಅಂತೀಯಾ. ಅಂಥಾ ಗಂಡ ಸಿಗೋದು ಅಪರೂಪ; ಹಾಗಿರುತ್ತಾನೆ. ನಿನ್ನೆರಾತ್ರಿಯ ಹೊಡೆತದ ಫಲ ಏನು ಗೊತ್ತೆ? ಇವತ್ತು ಸಂಜೆಯೊಳಗೆ ಸೀರೆ ಬರ್‍ತದೆ, ನೋಡು. ಮೇಲೆ ಮೂರು ವಾರ ಸಿನಿಮಾ."

"ನನ್ನ ಗಂಡ ಒರಟಲ್ಲವ್ಮ, ಗುಣವಂತ. ಬೈಯೋದು ಸಹ ಇಲ್ಲ"—ಸಿದ್ದವ್ವ ಅಭಿಮಾನವನ್ನು ತೋರ್ಪಡಿಸಿ ಹೇಳಿದಳು.

"ನನಗೆ ಗೊತ್ತು ಸಿದ್ದಿ. ನನ್ನ ಕಂಡರೆ ನಿನಗೆ ಆಗಲೆ ಹೊಟ್ಟೆ ಉರಿ ಅಲ್ವಾ? ಅದಕ್ಕೇ ನಿನ್ನ ಗಂಡನ್ನ ಹಾಗೆ ಹಿಡಿಸ್ಕೊಂಡ್ಕೂ ಬರ್ತೀಯಾ. ಶಾಂತಪ್ಪನಿಗೆ ಮೂವತ್ತೈದೇ ವರ್ಷ. ಅಷ್ಟರಲ್ಲೇ ಮುದಿಗೊಡ್ಡೇ. ಕೈ ಎತ್ತಿ ಹೊಡೆಯೋಕೆ ಆಗೋಲ್ಲಾ ಅನ್ನು. ಕೆಲಸ ಮುಗಿಸಿಕೊಂಡು ಮನೆಗೆ ಬಂದ್ರೆ, ಕೂತುಬಿಡ್ತಾನೆ ನೋಡು ಜಗಲಿಮೇಲೆ ಎಲೆಅಡಿಕೆ ಜಗೀತಾ ನಿಜ ಅಲ್ವೇ?"

"ಕಟ್ಟೆ ಮೇಲೆ ಕೂತುಕೊಂಡು ಎಲಡಿಕೆ ಜಗೀತಾನೆ, ನಿಜ. ಆದ್ರೆ ಅವನ ಹುಚ್ಚಾಟಕ್ಕೆ ನನ್ನ ಪಟ್ಟಿದೊಲ್ಲ - ಅದೂ ನಿಜ."

ಸಿದ್ದವ್ವನ ಮಾತಿಗೆ ಉತ್ತರವಾಗಿ ಗಂಗೆ ನಕ್ಕಳು. ಸಂತಸದ, ಹರ್ಷ ಪೂರಿತವಾದ ಆನಂದದ ನಗೆ. ಹೊಸ ಸಾಮಾನುಗಳನ್ನು ತನ್ನ ಗೆಳತಿಗೆ ತೋರಿಸುವಷ್ಟೇ ಹೆಮ್ಮೆಯಿಂದ, ಎಡಗೈ ಮೇಲಿನ ಸೆರಗನ್ನೆತ್ತಿ, ರಟ್ಟೆಯ ಮೇಲೆ ಬಲವಾಗಿ ಜಗಟಿ ಕೆಂಪಾಗಿದ್ದ ಗುರುತನ್ನು ಗಂಗೆ ಸಿದ್ದವ್ವನಿಗೆ ತೋರಿಸಿದಳು. ಗಂಗೆಯ ಮುಖದಲ್ಲಿ ಹೊಡೆತದ ನೋವಿನ ಸುಳಿವೇ ಇರಲಿಲ್ಲ. ತುಂಬಿದ ಪ್ರೇಮದ, ತುಳುಕುವ ಸೌಖ್ಯದ ಮುದ್ರೆ ಇತ್ತು. ಅವಳ ಈ ಸಂತುಷ್ಟಿ ಸಿದ್ದವ್ವನ ಮೇಲೆ ಪರಿಣಾಮ ಮಾಡದೆ ಇರಲಿಲ್ಲ. ಗಂಗೆಯ ಮಿತ್ರತ್ವಕ್ಕೆ ಕಳಂಕ ತಾರದ, ಗಂಗೆ ಆಗ ತನ್ನೆದುರಿಗೆ ಪ್ರದರ್ಶಿಸುತ್ತಿದ್ದ ದಾಂಪತ್ಯಸೌಖ್ಯದ ವಿಷಯದಲ್ಲಿ ಮಾತ್ರ ಸಿದ್ದವ್ವನಿಗೆ ಸ್ವಲ್ಪ ಮಾತ್ಸರ್ಯ ಉಂಟಾಯಿತು. ಪೆಟ್ಟು ತಿಂದೂ ಸುಖವನ್ನು ಅನುಭವಿಸುತ್ತಿರುವ ಗಂಗೆಯನ್ನು ನೋಡಿ ಆಶ್ಚರ್ಯವೂ ಆಯಿತು. ತನ್ನ ಮನದಲ್ಲಿ ಆದ ಈ ಬದಲಾವಣೆಗಳನ್ನು ಅವಳು ತನ್ನ ಮುಖದಲ್ಲಿಯೂ ಸೂಚಿಸಿದಳು. "ಹೊಡೆದರೆ ನಿನಗೆ ಪೆಟ್ಟಾಗುವುದಿಲ್ಲವೆ? ನೋವಾಗುವುದಿಲ್ಲವೆ?" ಎಂದು ಪ್ರಶ್ನಿಸಿದಳು.

"ನೋವೆ? ಗುಡ್ಡದ ಮೇಲಿಂದ ನಿನ್ನ ಉರುಳಿಬಿಟ್ಟರೆ, ಬುಡಕ್ಕೆ ಬಂದಾಗ ನಿನಗೆ ಹೆಂಗಿರುತ್ತೆ, ನೋಡ; ಗಂಡ ಪೆಟ್ಟುಕೊಟ್ರೆ ಹಾಗಾಗುತ್ತೆ ನಂಗೆ. ಆಕಾಶದ ನಕ್ಷತ್ರ ಎಲ್ಲ ಕೆಳಗೆ ಥಳೀರಂತ ಉರುಳಿಕೊಂಡು ಬೀಳುತ್ತೆ. ಎಡಮುಷ್ಟಿ ಏಟು ಬಿದ್ರೆ ಒಂದು ರವಕೆ, ಹೋಟೆಲ್ ತಿಂಡಿ. ಬಲಮುಷ್ಟಿ ಏಟು ಬಿದ್ರೆ ಒಂದು ಸೀರೆ, ಮೇಲೆ ಸಿನಿಮಾ."

ಸಿದ್ದವ್ವನಿಗೆ ಚಂದಣ್ಣನ ಮೇಲಿದ್ದ ತಿರಸ್ಕಾರ ಹೋಯಿತು. ಜತೆಗೆ ಪೆಟ್ಟಿನ ಸುಳಿವಿಲ್ಲದ ತನ್ನ ದಾಂಪತ್ಯದಲ್ಲಿ ಹೆಮ್ಮೆಯೂ ಮೂಡುವಾಯಿತು. ಕುತೂಹಲದಿಂದ "ನಿನ್ನ ಯಾಕೆ ಬಡೀತಾನೆ?" ಎಂದು ಕೇಳಿದಳು.

"ಯಾಕೆ? ನಿನಗೆ ಗೊತ್ತಿಲ್ವೆ? ನಿನಗೆ ಹ್ಯಾಗೆ ಗೊತ್ತಾಗಬೇಕು! ಶಾಂತಪ್ಪ ಕುಡಿಯೋನಲ್ಲ ಯಾಕೆ ಹೊಡೀತಾನೆ ಅಂದ್ರೆ, ಸಂಬಳ ತೊಗೊಂಡ ದಿನ ಭರ್ತಿ ಆಗಿ ಬರ್ತಾನೆ, ಅದಕ್ಕೆ."

"ಆದರೆ ನಿನ್ನ ಹೊಡೆಯೋಕೆ ಕಾರಣ?"

"ಕಾರಣಾ? ಕಾರಣ ಯಾಕೆ ಬೇಕು ಅದಕ್ಕೆ. ನನ್ನ ಲಗ್ನ ಆಗಿಲ್ವೆ? ನನ್ನನ್ನ ಪ್ರೀತಿಸೊಲ್ವೆ? ಇನ್ನಾರನ್ನಾದ್ರೂ ಹೊಡೀಲಿ, ನಾನು ಸುಮ್ಮನೆ ಬಿಡ್ತೀನೇನು? ಒಂದು ಸಲ ಮುದ್ದೆ ಬಹಳ ಬಿಸಿ ಆಯ್ತು ಅಂತ ಹೊಡೀತಾನೆ. ಒಂದು ಸಲ ಕಿಟಕಿ ಕಂಬಿ ಸೊಟ್ಟ ಯಾಕೆ ಇವೆ ಅಂತ ಹೊಡೀತಾನೆ. ಇಂಥಾದ್ದೇ ಕಾರಣ ಬೇಕು ಅಂತ ಒದ್ದಾಡೊಲ್ಲ. ಸಂಬಳ ಬರೋ ದಿವಸ, ಅವನು ರಾತ್ರಿ ಮನೆಗೆ ಬರುವ ಹೊತ್ತಿಗೆ ಅವನ ಕೈಗೆ ದೊಡ್ಡ ಸಾಮಾನು ಯಾವುದೂ ಸಿಗದಂತೆ ಬಚ್ಚಿಟ್ಟಿರ್ತೀನಿ. ಇಲ್ದೇ ಹೋದ್ರೆ ನನ್ನ ಪ್ರಾಣ ಉಳೀಬೇಕಲ್ಲ. ನನಗೆ ಏನೇನು ಬೇಕೋ ಅದಕ್ಕೆ ಒಳ್ಳೇಹಣ್ಣು ಹೊಡಿಸಿಕೊಂಡು ಆಮೇಲೆ ನಿಲ್ಲಿಸಿಬಿಡ್ತೀನಿ. ಮೂರನೇ ಸೀರೆ ತಂದುಕೊಡ್ತೀನೆ ಅಂತ ಮೂರು ತಿಂಗಳಿಂದ ಹೇಳ್ತಿದ್ದ, ನೋಡು; ತರಲಿಲ್ಲ. ಒಳ್ಕೆ ನನ್ನ ಜಾಸ್ತಿ ಪೆಟ್ಟಾಗೋತನಕ ಸುಮ್ಮನಿದ್ದೆ. ನೋಡ್ತಿರು, ಮನೆಗೆ ಬರುವಾಗ ಇವತ್ತು ಸೀರೆ ತರ್ತಾನೆ." ಗಂಗೆ ಹಿಗ್ಗುತ್ತಿದ್ದಳು.

ಸಿದ್ದವ್ವ ಯೋಚನೆಯ ತೊಡಕಿಗೆ ಸಿಕ್ಕಿದಳು. "ನಿಜ ಗಂಗಿ. ನನ್ನ ಗಂಡ ನನ್ನನ್ನು ಹೊಡೆಯೋದೇ ಇಲ್ಲ. ನೀನು ಹೇಳಿದ್ಹಾಗೆ ಕಟ್ಟೆಯ ಮೇಲೆ ಕೂತು, ಎಲಡಿಕೆ ಜಗಿಯೋದೊಂದೇ ಅವನ ಕೆಲಸ. ನನ್ನನ್ನು ಒಂದು ದಿವಸ ಸಿನಿಮಾಕ್ಕೆ ಕರಕೊಂಡು ಹೋಗಿಲ್ಲ; ಹೊಡದರೆ ತಾನೆ ಕರಕೊಂಡು ಹೋಗೋಕೆ! ಹೋಟಲ್ ತಿಂಡಿ ವಾಸನೇನೆ ನಮ್ಮ ಮನೆ ಒಳಗೆ ಬಂದಿಲ್ಲ" ಎಂದು ಗೊಣಗುಟ್ಟಿದಳು.

"ಅಯ್ಯೋ ಸಿದ್ದಿ! ನಿನ್ನ ಕಂಡ್ರೆ ನನಗೆ ಅಯ್ಯೋ ಅನಿಸುತ್ತೆ

ಎಲ್ಲರಿಗೂ ನನ್ನ ಗಂಡನಂಥ ಗಂಡ ಸಿಗ್ತಾನೇನೆ? ಅವನಂತೆ ಎಲ್ಲರೂ ಇದ್ರೆ ಜಗಳ ಯಾಕೆ ಆಗುತ್ತೆ? ಜಗಳ ಮಾಡೋ ಹೆಂಡತೀರಿಗೆಲ್ಲಾ, ಗಂಡಂದಿರು ತಿಂಗಳಿಗೊಮ್ಮೆ ಚೆನ್ನಾಗಿ ಬಡಿದು, ಆಮೇಲೆ ಜಾಸ್ತಿ ಪ್ರೀತಿಮಾಡಿ ಸಿನಿಮಾ, ತಿಂಡಿ, ಬಟ್ಟೆ, ಹೀಗೇನಾದ್ರೂ ಮಾಡಿದ್ರೆ ಜಗಳಾನೇ ಇರೋದಿಲ್ಲ." — ಇದು ಗಂಗೆಯ ಸಿದ್ಧಾಂತ.

ಸಿದ್ದವ್ವ ನಿಟ್ಟುಸುರುಬಿಟ್ಟಳು. ಅವಳಿಗೆ ವಿಚಿತ್ರ ವ್ಯಥೆಯಾಯಿತು.

"ಗಂಗೀ! ಏ ಗಂಗೀ!" ಎದುರುಮನೆಯಿಂದ ಚಂದಣ್ಣನ ನಿರ್ಮಲ ಕಂಠ ಕೇಳಿಸಿತು. ಜಿಂಕೆಯಂತೆ ಓಡಿದಳು ಗಂಗೆ ಸಿದ್ದವ್ವ ಬಾಗಿಲ ಬಳಿ ಬಂದು ನಿಂತು ನೋಡಿದಳು. ಚಂದಣ್ಣನ ಕೈಲಿ ಎರಡು ಗಂಟುಗಳಿದ್ದವು. "ಹೊಸ ಸೀರೆ ತಂದಿದ್ದೇನೆ ನೋಡು. ಸಣ್ಣ ಪೊಟ್ಟಣದಾಗೆ ಏನೈತೆ ಗೊತ್ತೆ? ಲಾಡು ಉಂಡೆ, ಬೋಂಡ. ಸಿನಿಮಾಕ್ಕೆ ಬರ್ತೀಯಾ, ಪಸಂದಾಗಿದಂತೆ - ಲವ ಕುಸ" ಎಂದು ಚಂದಣ್ಣ ತನ್ನ ಹೆಂಡತಿಗೆ ಅರ್ಪಿಸುತ್ತಿದ್ದ ಏಟುಗಳ ತೆರವನ್ನು ಸಿದ್ದವ್ವ ಕೇಳಿ ಮತ್ತೊಮ್ಮೆ ನಿಟ್ಟುಸುರುಬಿಟ್ಟಳು.

ಗಂಗೆ ಚಂದಣ್ಣ ಇಬ್ಬರೂ ತಿಂಡಿ ತಿಂದು, ಸಿನಿಮಾಕ್ಕೆ ಹೋದದ್ದನ್ನು ಸಿದ್ದವ್ವ ಗಮನಿಸಿದಳು. ಅವರು ಹೋದೊಡನೆ ಅವಳ ಕಣ್ಣುಗಳಲ್ಲಿ ನೀರು ಅತ್ತುಬಿಟ್ಟಳು, ನಿಜ. ಚಂದಣ್ಣ ಗಂಗೆಯನ್ನು ಹೊಡೆದರೂ ಚಿಂತೆಯಿಲ್ಲ; ತುಂಬಿತು; ಗಂಗೆಯ ಜೀವನದಲ್ಲಿ ಅದರ ಪರಿಣಾಮದಿಂದ ದಾಂಪತ್ಯಸೌಖ್ಯವೂ ಒಂದು ಮೆಟ್ಟಿಲು ಮೇಲೇರಿತ್ತು. ಗಂಗೆಯ ಜೀವನದಲ್ಲಿ ಹೊಡೆತದ ತಗ್ಗಿದ್ದರೂ ಪ್ರೇಮದ ದಿಣ್ಣೆ ಇತ್ತು. ಶಾಂತಪ್ಪ ಹೆಸರಿಗೆ ಸರಿಯಾಗಿ ಶಾಂತಸ್ವಭಾವದವನು, ಸಾಧುಮನುಷ್ಯ. ಸಿದ್ದವ್ವನನ್ನು ಪ್ರೀತಿಸದೇ ಇರುತ್ತಿರಲಿಲ್ಲ. ಅವಳೇ ಅವನ ಸರ್ವಸ್ವ. ಆದರೆ ತನ್ನ ಪ್ರೇಮವನ್ನು ಬಹಿರಂಗಪಡಿಸುತ್ತಲೂ ಇರಲಿಲ್ಲ. ಇವರಿಬ್ಬರ ದಾಂಪತ್ಯದಲ್ಲಿ ಇಳಿತವೂ ಇಲ್ಲ, ದಿಣ್ಣೆಯೂ ಇಲ್ಲ. ಸಿದ್ದವ್ವ ಅತ್ತಳು. ಅವಳದು ಆಶ್ಚರ್ಯಕರವಾದ ಅಳು. ಅರ್ಥವಿಲ್ಲದ ಅಳು. ವಿಚಿತ್ರವಾದ ಅಳು. ದಾಂಪತ್ಯಜೀವನದಲ್ಲಿ ವಿವಿಧವಾಗಿ ನೊಂದ ಸತಿಯರ ವ್ಯಥೆಗಳ ಪಟ್ಟಿಗೆ ಇನ್ನೂ ಸೇರದೇ ಇದ್ದ ವಿಚಿತ್ರ ವ್ಯಥೆಗಾಗಿ ಅತ್ತಳು. ಶಾಂತಪ್ಪನು ಎಂದೂ ತನ್ನನ್ನು ಹೊಡೆದಿರಲಿಲ್ಲ, ಅನಂತರ ಹೆಚ್ಚಾಗಿ

ಪ್ರೀತಿಯನ್ನೂ ತೋರ್ಪಡಿಸಿರಲಿಲ್ಲ ಎಂದು ಅತ್ತಳು. ತಗ್ಗುದಿಣ್ಣೆಗಳಿಲ್ಲದ, ವೈವಿಧ್ಯವಿಲ್ಲದ ಅವರ ಜೀವನ ಅವಳಿಗೆ ಇಂದು ಜುಗುಪ್ಸೆಯನ್ನುಂಟು ಮಾಡಿತು. ಇದುವರೆಗೂ ಸುಷುಪ್ತಾವಸ್ಥೆಯಲ್ಲಿದ್ದ ಅವಳ ರಾಗಾಭಿಲಾಷೆ ಇಂದು ಅವಳ ಹೃದಯದಲ್ಲಿ ಎಚ್ಚತ್ತಿತು.

ಸಂಜೆ ಏಳು ಗಂಟೆಗೆ ಶಾಂತಪ್ಪ ಬಂದು ಮಾಮೂಲಿನಂತೆ ಕೈಕಾಲು ತೊಳೆದುಕೊಂಡು ತಟ್ಟೆಹಾಕಿಕೊಂಡು ಊಟಕ್ಕೆ ಕುಳಿತ.

"ಸಾರು ಚೆನ್ನಾಗಿದೆಯೇ?" ಎಂದು ಸಿದ್ದವ್ವ ಕೇಳಿದಳು. "ಆ— ಓಹೋ! ಚೆನ್ನಾಗಿದೆ" ಎಂದು ಶಾಂತಪ್ಪ ಹೇಳಿದ. ಸಿದ್ದವ್ವ ಆ ರಾತ್ರಿ ಸಾರನ್ನು ಬೇಕೆಂದು ಕೆಡಿಸಿದ್ದಳು. ಮುದ್ದೆಯನ್ನೂ ಸರಿಯಾಗಿ ಬೇಯಿಸಿರ ಲಿಲ್ಲ. ಶಾಂತಪ್ಪ ಏನೂ ಸಿಟ್ಟುಮಾಡದೆ ಊಟಮಾಡಿ ಅನಂತರ ಜಗಲಿಯ ಮೇಲೆ ಕುಳಿತು ಎಲಡಿಕೆ ಹಾಕಿಕೊಳ್ಳಲಾರಂಭಿಸಿದ. ಸಿದ್ದವ್ವನಿಗೆ ಜುಗುಪ್ಸೆ ಅಧಿಕವಾಯಿತು.

ಮರುದಿವಸ ಭಾನುವಾರ. ಶಾಂತಪ್ಪ ಚಂದಣ್ಣ ಇಬ್ಬರಿಗೂ ರಜಾ. ಬೆಳಗ್ಗೆ ಸಿದ್ದವ್ವ ಗಂಗವ್ವನ ಮನೆಗೆ ಹೋಗಿದ್ದಳು. ಚಂದಣ್ಣ ತಂದಿದ್ದ ಸುವಾಸನೆ ವ್ಯಾಸಲೀನನ್ನು ಗಾಯಗಳಿಗೆ ಹಚ್ಚಿಕೊಂಡು ಗಂಗವ್ವ ಸುವಾಸನೆ ಯಾಗಿದ್ದಳು; ಮಲ್ಲಿಗೆಹೂವು ಮುಡಿದು ಪರಿಮಳ ಬೀರುತ್ತಿದ್ದಳು; ಹೊಸ ಸೀರೆಯುಟ್ಟು ನಗುವನ್ನು ಬೀರುತ್ತಿದ್ದಳು. ಏಕೆಂದರೆ ಚಂದಣ್ಣ ಅವಳನ್ನು ಲಾಲ್‌ಬಾಗಿಗೆ ಕರೆದುಕೊಂಡು ಹೋಗುವುದರಲ್ಲಿದ್ದ. ಸಿದ್ದವ್ವನ ವ್ಯಥೆ ದಾರುಣವಾಯ್ತು. ಚಂದಣ್ಣ ಹೊಡೆದ ಏಟುಗಳಲ್ಲಿ ಗಂಗೆಗೆ ಇಷ್ಟು ಸೌಖ್ಯ ವಿರುವುದೆಂದು ಅವಳು ತಿಳಿದಿರಲಿಲ್ಲ ತನ್ನ ಗಂಡನೂ ಸಿಟ್ಟಿಗೆದ್ದು ತನಗೂ ಛಟೀರನೆ ಕೆನ್ನೆಗೆ ಹೊಡೆಯಬಾರದೆ ಎಂದು ಬಂಜೆಯು ಮಗುವನ್ನು ಹಂಬ ಲಿಸುವಂತೆ ಸಿದ್ದವ್ವ ಶಾಂತಪ್ಪನ ಮುಷ್ಟಿಪ್ರಹಾರಕ್ಕೆ ಹಂಬಲಿಸಲಾರಂಭಿಸಿದಳು. ಯೋಚನೆ ಮಾಡುತ್ತಿದ್ದ ಅವಳಿಗೆ ಅಕಸ್ಮಾತ್ ಉಪಾಯವೊಂದು ಹೊಳೆದು ಅವಳ ಮುಖದಲ್ಲಿ ದೂರದ ಸೌಖ್ಯದ ಕನಸಿನ ಕುರುಹೂ ಕಂಡುಬಂದಿತು. ತನ್ನ ಗಂಡ ಹೊಡೆದ ಘಾಯದ ಕಲೆಗಳನ್ನು ತಾನೂ ಗಂಗವ್ವನಿಗೆ ಶೀಘ್ರ ದಲ್ಲೇ ತೋರಿಸುವೆನೆಂದುಕೊಂಡಳು.

ಇದ್ದಕಿದ್ದ ಹಾಗೆ ಅವಳು ಶಾಂತಪ್ಪನ ಬಳಿಗೆ ಬಂದು "ಏನು ಮಾಡ್ತಿದ್ದೀಯಾ? ರಜಾದಿವಸ ಸ್ವಲ್ಪ ಮನೆ ಕೆಲಸಕ್ಕೆ ಬರಬಾರದೇನೂ, ಗೂಬೆ ಕೂತ ಹಾಗೆ ಕೂತಿದ್ದರೆ ಬಿಡಲು" ಎಂದಳು. ಆಕಸ್ಮಾತ್ ಬದಲಾಯಿಸಿದ ಅವಳ ವರ್ತನೆಗೆ ಶಾಂತಪ್ಪ ಆಶ್ಚರ್ಯಗೊಂಡರೂ ಏನೂ ಉತ್ತರ ಕೊಡದೆ ತನ್ನ ಕೆಲಸವನ್ನು ಮಾಡಲಾರಂಭಿಸಿದ. ಸಿದ್ದವ್ವ ಹೆಚ್ಚು ಕೋಪಗೊಂಡು ಅವನು ಹೊಲಿಯುತ್ತಿದ್ದ ಅಂಗಿಯನ್ನು ಕಿತ್ಕೊಂಡು "ಹಿತ್ತಲಲ್ಲಿ ನನ್ನ ಸೀರೆ ನೆನಸಿಟ್ಟಿದ್ದೀನಿ, ಒಗಿ ಹೋಗು" ಎಂದು ಬೆಪ್ಪಾಗಿ ಕುಳಿತಿದ್ದ ಶಾಂತಪ್ಪನ ಕೆನ್ನೆಗೆ ಫಟೀರೆಂದು ಹೊಡೆದಳು. ಶಾಂತಪ್ಪ ಥಟ್ಟನೆ ಎದ್ದು ನಿಂತುಕೊಂಡ. ಸಿದ್ದವ್ವ ತನ್ನ ಇಷ್ಟಾರ್ಥ ಸಲ್ಲುವುದೆಂದು ಮನದಲ್ಲಿ ಆನಂದಿಸುತ್ತಾ ತನ್ನ ಯುಕ್ತಿಯನ್ನು ಸಾರ್ಥಕಪಡಿಸಲೋಸುಗ ಶಾಂತಪ್ಪನ ಕೆನ್ನೆಗೆ ಇನ್ನೊಂದು ಏಟು ಬಿಗಿದು, ಮುಂದಿನ ಕ್ಷಣ ಬರಲಿರುವ ವಿಚಿತ್ರಸೌಖ್ಯವನ್ನು ಅನುಭವಿಸಲು ತನ್ನ ಮುಖವನ್ನು ಶಾಂತಪ್ಪನ ಕೈಗಳಿಗೆ ಸಿಲುಕುವಂತೆ ಎತ್ತಿ ಹಿಡಿದು, ಆನಂದದಿಂದ ಕಣ್ಣುಗಳನ್ನು ಮುಚ್ಚಿ ಸಿದ್ಧಳಾಗಿ ನಿಂತಳು.

ಎದುರುಮನೆ ಚಂದಣ್ಣ ಗಂಗವ್ವನಿಗೆ "ಗಂಗಿ! ಶಾಂತಪ್ಪ ಸಿದ್ದಪ್ಪ ನಮ್ಮನ್ನೇ ಹೋಲ್ತಾ ಜರ್ತಿದಾರೆ ಕೇಳು ಜಗಳ ಆಡೋದು. ಸಿದ್ದವ್ವ ಇಷ್ಟು ಬಾಯಿ ಮಾಡಿದ್ದು ನಾನು ಎಂದೂ ಕೇಳಿರಲಿಲ್ಲ" ಎಂದ.

ಗಂಗವ್ವ ಆತುರದಿಂದ "ಹೌದು. ನಾನು ಹೋಗಿ ನೋಡಿಕೊಂಡು ಬರ್ತೀನಿ. ನನಗೆ ಗೊತ್ತು, ಸಿದ್ದವ್ವ ಯಾಕೆ ಜಗಳ ಕಾಯ್ತಾಳೆ ಅಂತ" ಎಂದು ಹೇಳಿ ಸಿದ್ದವ್ವನೆಡೆಗೆ ಓಡಿಬಂದಳು.

ಸಿದ್ದವ್ವ ಮನೆಯ ಮಧ್ಯದಲ್ಲಿ ನಿಂತಿದ್ದಳು. ಶಾಂತಪ್ಪ ಕಾಣಲಿಲ್ಲ. ಗಂಗೆ ಮೆಲ್ಲನೆ "ಸಿದ್ದಿ! ಹೊಡೆದನೆ? ಹೊಡೆದನೆ?" ಎಂದು ಪ್ರಶ್ನಿಸಿದಳು. ಸಿದ್ದವ್ವ ಬಿಕ್ಕಿಬಿಕ್ಕಿ ಅಳುತ್ತಾ ಮೆಲ್ಲನೆ "ಗಂಗಿ, ಯಾರಿಗೂ ಹೇಳ್ಬೇಡವ್ವಾ—ಯಾರಿಗೂ. ಶಿವಾ ಶಿವಾ— ಅವನು ನನ್ನನ್ನು ಮುಟ್ಟಲೇ ಇಲ್ಲ. ಮೆಲ್ಲಗೆ ಹೋಗಿ—ಹಿತ್ತಲ ಕಡೆ —ಸೀರೆ— ಶಿವಾ ಶಿವಾ— ನನ್ನ ಸೀರೇ— ಒಗೀತಾ ಇದಾನೆ" ಎಂದಳು.

---

'A Harem Tragedy' ಎಂಬ ಕಥೆಯ ಅನುವಾದ.

# ತಂತ್ರ ಚಿಕಿತ್ಸೆ

ಗೋಧಿ ರವೆಯಿಂದ ಎಷ್ಟೆಷ್ಟು ಬಗೆಯ ತಿಂಡಿಗಳನ್ನು ಮಾಡಲು ಬರುತ್ತದೆಯೋ ರಾಮುನ ಕಳ್ಳತನದ ವಿಧಾನಗಳೂ—ಅವನು ಕಸಬು ಮಾಡುತ್ತಿದ್ದಾಗ—ಅಷ್ಟು ಬಗೆಯಂತೆ. ಅವೆಲ್ಲದರಲ್ಲೂ ಅವನು ಹಕೀಮನಾಗಿ ನಡಸಿದ್ದು ಬಲು ಸೊಗಸು, ಮನೋರಂಜಕವಾದ್ದು.

"ನೋಡಿ...." ಅವನೇ ನನಗೆ ಹೇಳಿದ :

'ಆಗ ನಾನು ಪರ್ಶಿಯಾ ದೇಶದಿಂದ ಬಂದು, ಹಿಮಾಲಯ ಪರ್ವತದಲ್ಲಿ ಹಿಂದೂ ಪದ್ಧತಿಯ ಪ್ರಕಾರ ಯೋಗ ಮೊದಲಾದುವನ್ನು ಅಭ್ಯಾಸ ಮಾಡಿ, ಹಿಂದೂ ಸಂನ್ಯಾಸಿಯಂತೆಯೇ ಜೀವನ ನಡಸುತ್ತಿದ್ದ ಹಕೀಮ್ ಸಾಹೇಬ್ ಅಲ್ಲೀಖಾನ್ ಆಗಿದ್ದೆ. ನನ್ನಲ್ಲಿ ಆಗ ಒಂದು ಪ್ರಸಿದ್ಧ ಮೂಲಿಕೆ ಇತ್ತು. ಈಗ ಒಂದು ಸಾವಿರ ವರ್ಷಗಳ ಹಿಂದೆ ಈಜಿಪ್ಟ್ ದೇಶದ ರಾಣಿ, ತನ್ನ ಗಂಡನ ಜತೆಯಲ್ಲಿ ಬೇಟೆಯಾಡಲು ಹೋಗಿದ್ದಾಗ, ಕಾಡಿನಲ್ಲಿ ಅದನ್ನು ಅಕಸ್ಮಾತ್ ಕಂಡುಹಿಡಿದಿದ್ದಳು ; ಆ ಮೂಲಿಕೆ ನನಗೆ ವಂಶಪರಂಪರೆಯಾಗಿ ಹಸ್ತಗತವಾಗಿತ್ತು. ಆ ಮೂಲಿಕೆಯಿಂದ ನಾನು ಕಷಾಯ ತಯಾರುಮಾಡಿ ಮಾರುತ್ತಿದ್ದೆ. ನಾಲ್ಕಾರು ಊರು ಸುತ್ತಿ, ಕಡೆಗೆ ಹಂಪಾಪುರಕ್ಕೆ ಬಂದು ಸೇರಿದೆ.

ಹಿಂದಿನ ಊರಿನಲ್ಲಿ ಹೆಚ್ಚಾಗಿ ವ್ಯಾಪಾರ ಆಗಿರಲಿಲ್ಲವಾದ್ದರಿಂದ ನನ್ನಲ್ಲಿ ಐದಾರು ರೂಪಾಯಿ ಮಾತ್ರ ಉಳಿದಿತ್ತು. ಅದರಲ್ಲಿ ಎರಡು ರೂಪಾಯಿ ಕೊಟ್ಟು ರಾಣೆಬೆನ್ನೂರಿನಲ್ಲಿ ಕೆಲವು ಗಾಜಿನ ಸೀಶೆಗಳನ್ನೂ, ಒಂದು ರೂಪಾಯಿ ಕೊಟ್ಟು ನನ್ನ ಔಷಧಿಯ ಹೆಸರನ್ನು ಅಚ್ಚುಮಾಡಿದ

ಕೆಲವು ಚೀಟಿಗಳನ್ನೂ ತೆಗೆದುಕೊಂಡು ಬಂದಿದ್ದೆ. ಹಂಪಾಪುರಕ್ಕೆ ಬಂದು ಅರ್ಧ ಮುರಿದು ಬಿದ್ದಿದ್ದ ಛತ್ರದಲ್ಲಿ, ಒಂದು ಕೊಠಡಿಯಲ್ಲಿ ತಂಗಿದೆ. ಉಳಿದ ಭಾಗಗಳಲ್ಲಿ ಅಲ್ಲಿಯ ಸ್ಕೂಲುಮಾಸ್ತರು, ತಮಗೆ ಬಾಡಿಗೆಗೆ ಸರಿಯಾದ ಮನೆ ಒಂದೂ ಸಿಕ್ಕಲಿಲ್ಲವೆಂಬ ನೆಪದಿಂದ, ಎರಡು ವರ್ಷಗಳ ಹಿಂದಿನಿಂದಲೂ ಇದ್ದರಂತೆ! ಒಂದು ಕೊಡ ನೀರನ್ನು ತಂದು ನನ್ನಲ್ಲಿದ್ದ ಸೀಶೆಗಳನ್ನು ತುಂಬಿ ಅವನ್ನು ಸಾಲಾಗಿಟ್ಟು

ಪ್ರಸಿದ್ಧವಾದ ಈಜಿಪ್ಟ್ ದೇಶದ
ಸುಪ್ರಸಿದ್ಧ ರಾಣಿ ಕಂಡುಹಿಡಿದ
ಅತಿ ಪ್ರಸಿದ್ಧ
ಜೀವನ್ಮೂಲಿಕಾ
ಔಷಧಿ.
ಎಂಟಾಣೆ ಮಾತ್ರ!

ಎಂದು ಮುದ್ರಿಸಿದ್ದ ಚೀಟಿಗಳನ್ನು ಅದಕ್ಕೆ ಅಂಟಿಸಿದೆ. ದುಡ್ಡಿನ ಅಭಾವದಿಂದ ಅಲ್ಲಿಯವರೆಗೂ ಬೇಜಾರಾಗಿದ್ದ ನನ್ನ ಜೀವ ಹಿಟ್ಲರನ ಸೈನಿಕರಂತೆ ಸಾಲು ಸಾಲಾಗಿ ನಿಂತಿದ್ದ ಆ ಸೀಶೆಗಳನ್ನು ನೋಡಿ ಹುರುಪುಗೊಂಡಿತು.

ತಮಾಷೆ? ಮೋಸ? ಛೆ!! ನಾನು ಬರೀ ನೀರನ್ನು ಮಾರುತ್ತಿರಲಿಲ್ಲ. ಎಂಟಾಣೆ ಹಸಿಶುಂಠಿ, ಎಂಟಾಣೆ ಮೆಣಸು ಅರೆದು ಅದರ ಜತೆಗೆ ಹಾಕಿದ್ದೆ. ಹಾಗೆಲ್ಲಾ ಪೂರ್ತಿ ಮೋಸಮಾಡುವ ಅಭ್ಯಾಸವನ್ನೇನೂ ನಾನು ಇಟ್ಟಿರಲಿಲ್ಲ. ಬೇಕಾದರೆ ಕೇಳಿ! ನಾನು ಒಂದು ಸಲ ಒಂದು ಊರಿನಲ್ಲಿ ಆ ಸೀಶೆ ಮಾರಿದ ಮೇಲೆ, ಅದೇ ವೇಷದಿಂದ ಅದೇ ಊರಿಗೆ ಹಿಂದಿರುಗಿ ಹೋಗುತ್ತಿರಲಿಲ್ಲವಾದರೂ 'ಜೀವನ್ಮೂಲಿಕಾ ಔಷಧಿ'ಯನ್ನು ವಿಚಾರಿಸುತ್ತಿದ್ದ ಹಳೆಯ ಗಿರಾಕಿಗಳನ್ನು ನೋಡಿದೇನೆ.

ಆ ರಾತ್ರಿ ಸೀಶೆಗಳೆಲ್ಲವನ್ನೂ ಭರ್ತಿಮಾಡಿ ಮರುದಿವಸ ಪೆಟ್ಟಿಗೆಯಲ್ಲಿ ಅವನ್ನು ತುಂಬಿಕೊಂಡು ಮಾರಾಟಕ್ಕೆ ಪ್ರಾರಂಭಮಾಡಿದೆ. ಯಾವ ಊರಿನಲ್ಲಿ ಯಾವ ಖಾಯಿಲೆ ಹೆಚ್ಚಾಗಿರುತ್ತದೆಯೋ ಅಲ್ಲಿ ಆ ಖಾಯಿಲೆಗೆ ನನ್ನ 'ಜೀವನ್ಮೂಲಿಕಾ ಔಷಧಿ'ಯೇ ಗೊತ್ತಾದ ಮದ್ದು. ಹಾಗೂ ಹೀಗೂ

ಒಂದೆರಡು ಗಂಟೆ ಕಾಲ ನನ್ನ ಔಷಧಿಯ ಮಹತ್ತ್ವದ ವಿಷಯವಾಗಿ ಗಂಟಲು ಹರಿದುಕೊಂಡಮೇಲೆ ಒಂದೆರಡು ಸೀಶೆ ಮಾರಿದವು. ಆಮೇಲೆ ಪ್ರಾರಂಭ: ಪ್ರತಿಯೊಬ್ಬನೂ ಒಂದು ಸೀಶೆ ಕೇಳುವವನೇ. ಸುಮಾರು ಇಪ್ಪತ್ತು ಸೀಶೆ ಮಾರಿದ್ದೆ; ಅಷ್ಟುಹೊತ್ತಿಗೆ ನನ್ನ ಹೆಗಲ ಮೇಲೆ ಯಾರೋ ಭಾರವಾಗಿ ಕೈ ಇಟ್ಟರು. ಯಾರೆಂಬುದನ್ನು ಅರಿಯಲು ನಾನು ಹಿಂದಿರುಗಿ ನೋಡಬೇಕಾಗಿರಲಿಲ್ಲ; ಅದು ನನಗೆ ಚೆನ್ನಾಗಿ ಅಭ್ಯಾಸವಾಗಿತ್ತು. ನನ್ನ ಜೇಬಿನಿಂದ ಮೆಲ್ಲನೆ ಎರಡು ರೂಪಾಯಿ ತೆಗೆದು, ಹಿಂದಿರುಗಿ ನೋಡದೆಯೆ, ಅವನ್ನು ಆ ಹಸ್ತದೊಳಗೆ ತೂರಿಸಿದೆ. ನನ್ನ ಭುಜವನ್ನು ಬಿಟ್ಟು ಆ ನಾಣ್ಯಗಳನ್ನು ಮುಷ್ಟಿಯಲ್ಲಿ ಸೇರಿಸಿಕೊಂಡು, ಆ ತೋಳು ಕೆಳಕ್ಕಿಳಿಯಿತು. ಅನಂತರ ನಾನು ಹಿಂದಿರುಗಿ 'ಏನು ದಫೇದಾರರೆ?' ಎಂದು ವಿಚಾರಿಸಿದೆ - ಇದು ಮುಖ್ಯ—ಆ ಎರಡು ರೂಪಾಯಿಗಳ ಸಮಾಚಾರನೇ ನಮ್ಮಿಬ್ಬರಿಗೂ ತಿಳಿಯದಂತೆ! 'ಈ ಊರಿನಲ್ಲಿ ಮುನಿಸಿಪಾಲಿಟಿ ಅಧ್ಯಕ್ಷರ ಅಪ್ಪಣೆಯಿಲ್ಲದೆ ಯಾರೂ ಔಷಧಿ ಮಾರಕೂಡದು; ವೈದ್ಯವನ್ನೂ ಮಾಡಕೂಡದು' ಎಂದು ಸ್ಥಳದ ಕಾನೂನನ್ನು ದಫೇದಾರರು ವಿವರಿಸಿ ಹೇಳಿದರು.

'ಇದು ಊರೇ? ಸರಿಸರಿ, ನಾನು ಇದು ಹಳ್ಳಿ ಎಂದು ತಿಳಿದಿದ್ದೆ. ಪರವಾ ಇಲ್ಲ, ನಾಳೆ ನಾಡಿದ್ದರಲ್ಲಿ ಲೈಸನ್ಸು ಪಡೆಯುತ್ತೇನೆ. ಅಷ್ಟರವರೆಗೆ ಮಾಫ್ ಮಾಡಬೇಕು' ಎಂದು ಕೇಳಿಕೊಂಡೆ.

'ಇನ್ನೆರಡು ದಿವಸ ವಾಯಿದೆ ಕೊಟ್ಟಿದ್ದೇನೆ. ಅಷ್ಟರಲ್ಲಿ ಲೈಸನ್ಸು ಪಡೆಯಬೇಕು. ಇಲ್ಲದಿದ್ದರೆ ಈ ಊರು ಬಿಡಬೇಕು' ಎಂದು ದಫೇದಾರರು ನನಗೆ ಉತ್ತರ ಹೇಳಿ ಹೊರಟುಹೋದರು. ನಾನು ಕಣ್ಣು ಮಿಟಕಿಸಿ ಸಲಾಂ ಹೇಳಿ, ಛತ್ರಕ್ಕೆ ಹಿಂದಿರುಗಿದೆ.

ಮರುದಿವಸ ಅಲ್ಲಿಯ ಮುನಿಸಿಪಾಲಿಟಿ ಕಾರ್ಯಾಲಯಕ್ಕೆ ಲೈಸನ್ಸ್ ಪಡೆಯಲು ಹೋದೆ. ಮುನಿಸಿಪಾಲಿಟಿ ಅಧ್ಯಕ್ಷರೇ ಲೈಸನ್ಸ್ ಕೊಡತಕ್ಕವರು. ಅವರು ಲೈಸನ್ಸ್ ಕೊಡದಿದ್ದರೆ ಆ ಊರಿನಲ್ಲಿ ಯಾರೂ ಔಷಧಿಯನ್ನು ಮಾರಕೂಡದಂತೆ. ಅಲ್ಲಿಗೆ ಮೂರು ವರ್ಷಗಳಿಂದ ಅವರು ಯಾರಿಗೂ ಲೈಸನ್ಸ್ ಕೊಟ್ಟಿರಲಿಲ್ಲವಂತೆ. ಅದರ ಕಾರಣ ನನಗೆ ಆಮೇಲೆ ತಿಳಿಯಿತು. ಅಧ್ಯಕ್ಷರ ಅಳಿಯಂದಿರು ಮೂರೂವರೆ ವರ್ಷದಿಂದ ಅದೇ ಊರಿನಲ್ಲಿ ಔಷಧಾ

ಲಯ ಸ್ಥಾಪಿಸಿದ್ದರಂತೆ. ಅಧ್ಯಕ್ಷರು ಬಂದಿರಲಿಲ್ಲವಾದುದರಿಂದಲೂ, ಅವರು ಬರುವ ಹೊತ್ತುಗೊತ್ತು ಯಾವುದೂ ಇರಲಿಲ್ಲವಾದುದರಿಂದಲೂ ಅಲ್ಲಿಯೇ ಸಂಜೆಯವರೆಗೂ ಕುಳಿತು ಬಿಡೋಣವೆಂದು ಸ್ವಲ್ಪ ದೂರವಲ್ಲಿದ್ದ ಎಮ್ಮೆ ಕಟ್ಟೆಯ ಮೇಲೆ ಕುಳಿತುಬಿಟ್ಟೆ.

ಸ್ವಲ್ಪ ಹೊತ್ತಿನಲ್ಲೇ ಖಾದಿಟೋಪಿ ಇಟ್ಟು, ಖಾದೀ ಅಂಗಿ ಚಲ್ಲಣ ತೊಟ್ಟು, ಎದೆಯ ಮೇಲೆ ಪುಟ್ಟ ಕಾಂಗ್ರೆಸ್ ಬಾವುಟ ಸಿಕ್ಕಿಸಿಕೊಂಡಿದ್ದ ಕಾಂಗ್ರೆಸ್ಸಿನವನೊಬ್ಬ, ಅಧ್ಯಕ್ಷರನ್ನು ನೋಡಬೇಕೆಂಬ ಉದ್ದೇಶದಿಂದ ನನ್ನ ಬಳಿ ಬಂದು ಕುಳಿತುಕೊಂಡ. ಅವನ ಹತ್ತಿರ ಒಂದು ಬೀಡಿಯನ್ನೂ ಬೆಂಕಿ ಪಟ್ಟಣವನ್ನೂ ಇಸಕೊಂಡು ನಾನು ಅವನನ್ನು ಸ್ವಲ್ಪ ಹೊತ್ತು ಗಮನಿಸಿ, ಅನಂತರ ಗುರುತು ಹಿಡಿದು - ಲೋ! ನೀನು ಗಿಡ್ಡಪ್ಪ ಅಲ್ಲೇನೋ? ಮೀಸೆ ಬೋಳಿಸಿ ಬಿಟ್ಟಿದೀಯಾ, ನಿನ್ನನ್ನು ನೋಡಿ ಎಂಟು ವರ್ಷ ಆಯ್ತು, ಅಲ್ಲೇನೋ? ಆಗ ನಾವು ಮೈಸೂರಿನಲ್ಲಿ ಒಟ್ಟಿಗೆ ಕೆಲಸಮಾಡುತ್ತಿರಲಿಲ್ಲೇ? ಅರಸರ ಮನೆ 'ಉಂಗುರ' ಎಂದು ಹೇಳಿ ನನ್ನ ನೆನಪನ್ನೂ ಕೊಟ್ಟೆ. ಅವನು ನನ್ನ ಮಾತು ಕೇಳಿ ತಬ್ಬಿಬ್ಬಾದ. ನಾನು ಕನಿಕರಪಟ್ಟು 'ಗುರುತು ಸಿಕ್ಕಲಿಲ್ಲ ವೇನೋ? ನಾನು ರಾಮು ಕಣೋ! ಈಗ ಸದ್ಯ, ಹಕೀಂ ಅಲ್ಲೀಖಾನ್ ಆಗಿ ದೇನೆ' ಎಂದೆ. ಗಿಡ್ಡಪ್ಪನ ಮುಖ ಅರಳಿದ ಸೂರ್ಯಕಾಂತಿ ಹೂವಾಯ್ತು. 'ರಾಮು, ನಿನ್ನ ಗುರುತೇ ಸಿಕ್ಕಲಿಲ್ಲ ನೋಡು. ಓಹೋ! ಈಗ ಹಕೀಮ್ ಆಗಿದೀಯಾ. ಹೇಗಿದೆ ಗ್ರಹಗತಿ?' ಎಂದ. ನಾನು ಅವನಿಗೆ ನನ್ನ ಪುರಾಣ ವನ್ನೆಲ್ಲಾ ಹೇಳಿ 'ನಿನ್ನ ಅದೃಷ್ಟ ಹೇಗೆ?' ಎಂದು ಕೇಳಿದೆ. ಅವನು 'ನಾನು ಈಗ ಕಾಂಗ್ರೆಸ್ ಸ್ವಯಂಸೇವಕ. ನನ್ನ ಹೆಸರು ಕುಮಾರ್. ಅಖಿಲ ಭಾರತದ ಗೋಹತ್ಯ ನಿವಾರಣಾಸಂಘದ ಅಖಿಲ ಕರ್ನಾಟಕ ಶಾಖೆಗೆ ನಾನು ಸ್ವಯಂಸ್ಥಾಪನಾಧ್ಯಕ್ಷ. ಚಂದಾ ಎತ್ತುತ್ತಿದೇನೆ ಈಗ ನಾಲ್ಕು ತಿಂಗಳಿಂದ. ಹೊಟ್ಟೆಗೂ ಬಟ್ಟೆಗೂ ನಡೆಯುತ್ತೆ, ಅಷ್ಟೆ!' ಎಂದ.

ನನಗೆ ಒಬ್ಬ ಸರಿಯಾದ ವಾಲುಗಾರ ಬೇಕಾಗಿತ್ತು. ಸದ್ಯ, ಗಿಡ್ಡಪ್ಪ ಸಿಕ್ಕಿದ! ಇಬ್ಬರೂ ಅಲ್ಲೇ ಸ್ವಲ್ಪ ಹೊತ್ತು ಮಾತನಾಡುತ್ತ ಕುಳಿತುಕೊಂಡೆವು.

ಮಾರನೆ ದಿವಸ ನನ್ನ ಕೊಠಡಿಯಲ್ಲಿ ಕುಳಿತುಕೊಂಡು ಬೀಡಿ ಸೇದು ತ್ತಿದ್ದೆ. ಆ ಊರಿನ ಮುನಿಸಿಪಾಲಟಿ ಅಧ್ಯಕ್ಷರಾಗಿದ್ದ ರಂಗಶೆಟ್ಟರ ಆಳು

ಬಂದು 'ರಂಗಶೆಟ್ಟರಿಗೆ ಬಹಳ ಖಾಯಿಲೆ ಆಗಿದೆ, ದಯೆಯಿಟ್ಟು ಅವರನ್ನು ಪರೀಕ್ಷಿಸಿ ಔಷಧ ಕೊಡಬೇಕು, ಅವರೇ ಹೇಳಿ ಕಳಿಸಿದಾರೆ' ಎಂದು ತಿಳಿಸಿದ.

'ಈ ಊರಿನಲ್ಲಿ ಡಾಕ್ಟರು ಇದಾರಲ್ಲಾ, ಅವರ ಹತ್ತಿರ ಹೋಗಿ ನಿಮ್ಮ ಅಧ್ಯಕ್ಷರಿಗೆ ಔಷಧಿ ಬೇಕಾದರೆ—' ನಾನು ಬಿಗುಮಾನದಿಂದ ಹೇಳಿದೆ.

'ಹಕೀಮ ಖಾನ್, ಈ ಊರಿನ ಡಾಕ್ಟರು ಹುಬ್ಬಳ್ಳಿಗೆ ಹೋಗಿದಾರೆ. ಹದಿನೈದು ದಿವಸವಾಯಿತು. ಇನ್ನೆರಡು ತಿಂಗಳು ಬರುವ ಹಾಗಿಲ್ಲ. ಅಧ್ಯಕ್ಷರಿಗೆ ಖಾಯಿಲೆ ಬಹಳ ಜೋರಾಗಿದೆ. ಈಗ ಈ ಊರಿನಲ್ಲಿ ಔಷಧ ಕೊಡುವವರು ನೀವಲ್ಲದೆ ಮತ್ತಾರೂ ಇಲ್ಲ. ನೀವು ಖಂಡಿತ ಬರಬೇಕೆಂದು ಹೇಳಿ ಕಳುಹಿಸಿದಾರೆ' ಎಂದು ಆ ಆಳು ಹೇಳಿದ.

'ಭೂತದಯೆ, ಭೂತದಯೆ ಇದೆಯಲ್ಲ, ಅದಕ್ಕಾಗಿ ಬರುತ್ತೇನೆ. ಖಾಯಿಲೆ ಬಿದ್ದು ನರಳುತ್ತಿರುವ ಮನುಷ್ಯನನ್ನು ನೋಡಿಕೊಂಡು ಬರುವುದಕ್ಕೆ ಬರುತ್ತೇನೆ; ಔಷಧ ಕೊಡಲಿಕ್ಕಲ್ಲ' ಎಂದು ಹೇಳಿ, ನನ್ನ ಕೈಚೀಲದಲ್ಲಿ ನಾಲ್ಕಾರು 'ಜೀವನ್ಮೂಲಿಕಾ ಔಷಧಿ' ಸೀಶೆಗಳನ್ನು ಹಾಕಿಕೊಂಡು ಅಧ್ಯಕ್ಷರ ಮನೆಗೆ ಹೋದೆ.

ಆ ಊರಿನ ಮನೆಗಳಲ್ಲೆಲ್ಲಾ ಅಧ್ಯಕ್ಷರ ಮನೆಯೇ ಬಹಳ ಚೆನ್ನಾಗಿದ್ದದ್ದು. ಇತರೇ ಬೀದಿಗಳೆಲ್ಲಾ ಚರಂಡಿಗಳೇ ಆಗಿದ್ದರೂ ಅಧ್ಯಕ್ಷರ ಮನೆ ರಸ್ತೆಗೆ ಮಾತ್ರ ಟಾರ್ ಹಾಕಿಸಿತ್ತು. ಎರಡು ಮೂರು ರಸ್ತೆಗಳಿಗೆ ಒಂದೊಂದು ದೀಪವೂ ಕಾಣಬರದಿದ್ದರೂ, ಆ ರಸ್ತೆಗೆ ಮಾತ್ರ ನಾಲ್ಕು ದೀಪಗಳೂ, ಅಧ್ಯಕ್ಷರ ಮನೆಗೆ ಆ ಕಡೆ ಈ ಕಡೆ ಎರಡು ದೀಪಗಳೂ ಇದ್ದವು. ಆ ಊರಿನ 'ಜಾಡಮಾಲಿ'ಗಳೆಲ್ಲಾ ಅದೊಂದೇ ರಸ್ತೆಯಲ್ಲಿ ಕಸ ಗುಡಿಸುತ್ತಿದ್ದರೆಂದು ಕಾಣುತ್ತದೆ.

ಅಧ್ಯಕ್ಷ ರಂಗಶೆಟ್ಟರ ಕೋರೆ ತಿರುಗಿಸಿದ ಹುಲಿ-ಭೀಮ ಮೀಸೆ ಕುಡಿಯ ಹೊರತು, ಉಳಿದ ಅಂಗಾಂಗಗಳೆಲ್ಲವೂ ಹೊದಿಕೆಯ ಒಳಗೆ ಹುದುಗಿದ್ದವು. ಉಸಿರಾಡಿದರೆ ಕಮ್ಮಾರನ ತಿದಿಯನ್ನು ಒತ್ತಿದಂತಾಗುತ್ತಿತ್ತು. ಅವರು ಮಲಗಿದ್ದುದನ್ನು ನೋಡಿದರೆ, ಮಂಚದ ಮೇಲೆ ಒಂದು ಎಮ್ಮೆಯನ್ನು ಮಲಗಿಸಿ ಬಟ್ಟೆ ಹೊದಿಸಿದಂತಿತ್ತು. ಮಂಚದ ಪಕ್ಕದಲ್ಲಿ ಯುವಕನೊಬ್ಬ ಎಂಟು ಹತ್ತು ಚಪಾತಿಗಳಿದ್ದ ತಟ್ಟೆಯನ್ನು ಎರಡು ಕೈಗಳಲ್ಲೂ ಹಿಡಿದುಕೊಂಡು ನಿಂತಿದ್ದ.

'ಹಕೀಮ್‌ಸಾಬ್, ಬಹಳ ಸುಸ್ತು-ಸುಸ್ತಾಗಿದೇನೆ, ದಯವಿಟ್ಟು ಗುಣ ಮಾಡಿ' ಎಂದು ರಂಗಶೆಟ್ಟರು ಮುಲುಗುತ್ತಾ ಕ್ಷೀಣಸ್ವರದಲ್ಲಿ ಹೇಳಿದರು.

'ಅಧ್ಯಕ್ಷ ಸಾಬ್, ನಾನು ಕಾಲೇಜಿನಲ್ಲಿ ವ್ಯಾಸಂಗಮಾಡಿ ಕಲಿತ ಡಾಕ್ಟರಲ್ಲ; ಹಕೀಮ್. ನಾನೇ ಸ್ವಂತ ವ್ಯಾಸಂಗಮಾಡಿದೇನೆ. ಯುನಾನಿ, ಹೋಮಿಯಾಪತಿ, ಅಲಿಯಾಪತಿ, ಗಜಪತಿ, ಪಶುಪತಿ, ಮಂತ್ರಶಕ್ತಿ, ತಂತ್ರ ಶಕ್ತಿ-ಇವುಗಳೆನ್ನೆಲ್ಲಾ ಅಭ್ಯಾಸ ಮಾಡಿದೇನೆ. ಆದರೆ ನಿಮ್ಮಲ್ಲಿಗೆ ನಾನು ಹಕೀಮ್ ಎಂತ ಬರಲಿಲ್ಲ ಭೂತದಯೆಗಾಗಿ, ಖಾಯಿಲೆ ಮನುಷ್ಯನ್ನ ಮಾತನಾಡಿಸಿಕೊಂಡು ಹೋಗೋಣ ಎಂದು ಬಂದೆ. ಅಷ್ಟೆ! ಪಕ್ಕದ ಮನೆ ಯವನ ಹಾಗೆ ಬಂದಿದೇನೆ' ಎಂದೆ.

'ಸಂತೋಷ, ಬಹಳ ಸಂತೋಷ! ಹಕೀಮ ಖಾನ್. ಈತ, ಈ ಯುವಕ, ನನ್ನ ಮೈದುನ ಪುಟ್ಟಣ್ಣಶೆಟ್ಟಿ. ನನ್ನ ಯಾತನೆ ಕಡಿಮೆಮಾಡ ಲಿಕ್ಕೆ ತಿಪ್ಪಲರ್ಾಗ ಹಾಕ್ತಾ ಇದಾನೆ, ಪಾಪ.. ನನಗೇನೋ ದಿನೇದಿನೇ ಬಾಧೆ ಹೆಚ್ಚ್ಚುತಾ ಇದೆ. ಹಾ-ಹಾಹಾ! ಬ.. ಹೊ ಹೋ! ಬಂ-ತೂ! ಸ.. ಸ.. ತ್ತೇ' ಎಂದು ನಾಲ್ಕು ಬೆಕ್ಕು ಒಟ್ಟಿಗೆ ಜಗಳವಾಡುವಂತೆ ರಂಗಶೆಟ್ಟರು ಶಬ್ದಮಾಡಿದರು.

ನನಗೆ ಸ್ವಲ್ಪ ಮನಸ್ಸು ಕರಗಿತು. 'ಲಾಗಾಹಾಕಿ ಖಾಯಿಲೆಯನ್ನು ಯಾರೂ ಗುಣಮಾಡಿಲ್ಲ. ಇರಲಿ, ಎಷ್ಟು ದಿವಸದಿಂದ ಹೀಗಾಗಿದೆ?' ಎಂದು ವಿಚಾರಿಸಿದೆ.

'ನಿನ್ನೆ.. ನಿನ್ನೆರಾತ್ರಿ.. ಯಿಂದ. ಓಹೋ! ತಿರುಗಿ ಬಂ.. ತ.. ಪ್ಪಾ' ಎಂದು ಕೂಗಾಡಿ, ಅನಂತರ 'ಔಷಧಿ ಕೊಡಿರಪ್ಪಾ' ಎಂದು ಬೇಡಿ ಕೊಂಡರು ಶೆಟ್ಟರು.

'ಶೆಟ್ಟಣ್ಣ ಪುಟ್ಟಿ, ಆ ಕಿಟಕಿ ಬಾಗಿಲು ಸ್ವಲ್ಪ ತೆಗೆ' ಎಂದು ನಾನು ಆ ಯುವಕನಿಗೆ ಹೇಳಿದೆ.

'ಶೆಟ್ಟಣ್ಣ ಪುಟ್ಟಿಯಲ್ಲ, ಪುಟ್ಟಣ್ಣಶೆಟ್ಟಿ.. ಏನು ಭಾವ, ಈ ಚಪಾತಿ ಗಳಲ್ಲಿ ಮೂರು ನಾಲ್ಕಾದರೂ ತೆಗೆದುಕೋ' ಎಂದು ಆ ಯುವಕ ಒತ್ತಾಯ ಮಾಡಿದ.

ನಾನು ನನ್ನ ಕಿವಿಯನ್ನು ರಂಗಶೆಟ್ಟರ ಬಲಭುಜದ ಮೇಲಿಟ್ಟು ನಾಲ್ಕಾರು ನಿಮಿಷ ಕೇಳಿ ಅನಂತರ 'ಅಧ್ಯಕ್ಷರೆ, ನಿಮ್ಮಲ್ಲಿ ಪಿತ್ತರಸ ಅಧಿಕಾಧಿಕವಾಗಿ, ಜಠರಾಗ್ನಿ ಮಂದವಾಗಿ, ಶೀತೋಷ್ಣಗಳು ವಿಪರೀತವಾಗಿ, ಗುಲ್ಮಾದಿಗಳು ಬಲಭುಜದ ಕೆಳಗೆ ಹೆಪ್ಪುಗಟ್ಟಿ ಕೊಳೆಯುತ್ತಿವೆ. ಬಹಳ ಕೆಟ್ಟ ವ್ಯಾಧಿ ಇದು' ಎಂದು ಹೇಳಿಬಿಟ್ಟೆ.

'ಇನ್ನೇನು ಗತಿ ಹಕೀಮ್‌ಸಾಬ್? ಅದನ್ನು.. ಆ.. ಜುಲ್ಮಾಗ್ನಿಗಳನ್ನು ಹೇಗಾದರೂ ಮಾಡಿ ತೆಗೆದು ಹಾಕಿಬಿಡಿ. ಅದರ ಬಾಧೆ ತಡೆಯಲಾರೆ' ಎಂದು ರಂಗಶೆಟ್ಟರು ಕೈಜೋಡಿಸಿ ಕೇಳಿಕೊಂಡರು.

ಕುರ್ಚಿಯ ಮೇಲಿಟ್ಟಿದ್ದ ನನ್ನ ಕೈಚೀಲವನ್ನು ಹೆಗಲಮೇಲೆ ಹಾಕಿಕೊಂಡು ನಾನು ಬಾಗಿಲ ಕಡೆ ಹೊರಟೆ.

'ಹಕೀಮ್‌ಖಾನ್, ಹಕೀಮ್‌ಖಾನ್, ನೀವು ಹೊರಟುಹೋಗುತ್ತೀರಾ? ನನಗೆ ಔಷಧಿ ಕೊಡುವುದಿಲ್ಲವೇ? ಹೋಗಬೇಡಿರಪ್ಪಾ, ನಿಮ್ಮ ಕಾಲಿಗೆ ಬೀಳುತ್ತೇನೆ' ಎಂದು ರಂಗಶೆಟ್ಟರು ಕಣ್ಣೀರು ಸುರಿಸುತ್ತಾ ಬೇಡಿಕೊಂಡರು.

'ದೈವದ ದಯೆ – ಅದೇ ನೀವು ಹೇಳಿದ ಆ ಭೂತದ್ದು. ಅದಕ್ಕಾಗಿಯಾದರೂ ನಮ್ಮ ಭಾವನಿಗೆ ಔಷಧಿ ಕೊಡಿ, ಖಾಲೀ ಆನರ್ ಸಾಬರೆ!' ಎಂದು ಆ ಯುವಕನೂ ಹೇಳಿದ.

'ಅಲ್ಲೀಖಾನ್ . . . ಅಧ್ಯಕ್ಷರೆ, ಔಷಧಿಗಳಿಂದ ನಿಮಗೆ ಏನೂ ಪ್ರಯೋಜನವಾಗುವ ಹಾಗಿಲ್ಲ. ಎಲ್ಲಾ ಔಷಧಿಗಳನ್ನೂ ಮೀರಿಬಿಟ್ಟಿದೆ ನಿಮ್ಮ ಜಾಡ್ಯ. ಆದರೆ ಔಷಧಿಗಳಿಗೂ ಹೆಚ್ಚಿನ ಶಕ್ತಿ ಒಂದಿದೆ. ಅದರಿಂದಲೇ ನಿಮಗೆ ಗುಣವಾಗಬೇಕು' ಎಂದೆ ಹಿಂದಿರುಗಿ ಬಂದು.

'ಏನು! ಏನದು?' ಎಂದು ರಂಗಶೆಟ್ಟರು ಆರ್ತನಾದವನ್ನೇ ಮಾಡಿದರು.

'ತಂತ್ರಶಕ್ತಿ. ರಕ್ತಮಾಂಸಾದಿಗಳಿಗೆ ಅತೀತವಾಗಿರುವ ದೈವೀ ತಂತ್ರಶಕ್ತಿ ಮನಶ್ಶಕ್ತಿ. ನನ್ನಲ್ಲಿ ಖಾಯಿಲೆ ಇಲ್ಲ, ನಾನು ರೋಗಿಯಲ್ಲ ಎಂದು ಮೊದಲು ಹಠಯೋಗ ಮಾಡಬೇಕು. ಹಾಗೆ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು ನಾನು ಹೇಳಿದಂತೆ ನಡೆದುಕೊಂಡರೆ . . .' ಎಂದೆ.

'ಏನು ಹಕೀಮರೆ, ನೀವೇನು ವೈದ್ಯರೋ, ಮಾಯಗಾರರೋ?' ಎಂದು ರಂಗಶೆಟ್ಟರು ಮುಲುಗಿದರು. ಅವರಿಗೆ ಸ್ವಲ್ಪ ಭಯವೇ ಆಗಿದ್ದಿರಬೇಕು.

ಮರೆತುಹೋಗಿರುವ, ಹಾಳಾಗಿರುವ, ಯೋಗದ ಮಹಿಮೆಯ ವಿಚಾರ ನಾನು ಹೇಳಿದ್ದು. ಪರಕೀಯನಾದ ನಾನು ಅದನ್ನು ನಿಮಗಿಂತಲೂ ಹೆಚ್ಚಾಗಿ ಅಭ್ಯಾಸ ಮಾಡಿದೇನೆ. . ತಿಳಿಯಿತೆ? ಯೋಗದ ಸಹಾಯದಿಂದ ಇಂದ್ರಿಯಗಳನ್ನು ಮೀರಿರುವ ಸೂಕ್ಷ್ಮಜೀವನೊಡನೆ ಮನೋಮಾರ್ಗದ ಮೂಲಕ ಸಮಾಗಮ ಹೊಂದಿ, ಅಲ್ಲಿಂದ ದೇಹದ ರೋಗ ರುಜಿನಗಳನ್ನು ತಂತ್ರಶಕ್ತಿಯಿಂದ ಗುಣಮಾಡಬೇಕು. ಇದೇ ಶ್ರೇಷ್ಠವಾದ ಉತ್ತಮವಾದ ತಂತ್ರಶಕ್ತಿ. ಅಂಥಾ ಅದ್ಭುತ ಮಹಿಮೆಯುಳ್ಳ ತಂತ್ರಚಿಕಿತ್ಸೆಯನ್ನು ನಾನು ನಿಮಗೆ ಹೇಳಿದೆ. ಜಾತ್ರೆಯಲ್ಲಿ ಡೇರೆಹಾಕಿ ಮರಳಿನ ಚೀಲದಲ್ಲಿ ಮೊಲವನ್ನು ಬರಮಾಡುವ ಮಾಯಗಾರನ ಕೈಚಳಕವನ್ನೆಲ್ಲ ನಾನು ಹೇಳಿದ್ದು' ಎಂದು ವ್ಯಾಖ್ಯಾನವನ್ನೇ ಮಾಡಿದೆ.

'ಹಕೀಮ್‌ಖಾನ್, ನೀವು ನಿಮ್ಮ ತಂತ್ರದಿಂದ ನನ್ನ ರೋಗವನ್ನು ಪೂರ್ತಿ ಗುಣಮಾಡುತ್ತೀರಾ?' ಎಂದು ನನ್ನನ್ನು ರಂಗಶೆಟ್ಟರು ಕೇಳಿಕೊಂಡರು.

'ಪಂಡಿತ ಮದನಮೋಹನ ಮಾಲವೀಯರು - ಅವರ ಹೆಸರು ನಿಮ್ಮ ತನಕ ಬಂದಿದೆಯೋ ಇಲ್ಲವೋ-ಈಚೆಗೆ ಕಾಯಕಲ್ಪ ವ್ರತವನ್ನು ಕೈಕೊಂಡರು. ತಾವು ಕೇಳಿರಬಹುದು. ಆ ಸಂದರ್ಭದಲ್ಲಿ ನಡೆದ ತಂತ್ರಚಿಕಿತ್ಸೆಯ ಭಾಗವೆಲ್ಲಾ ನನ್ನಿಂದಲೇ ಸಾಧಿಸಲ್ಪಟ್ಟದ್ದು. ರಸ್ತೆಗಳಲ್ಲಿ ನನ್ನ 'ಜೀವನ್ಮೂಲಿಕಾ ಔಷಧಿ'ಯನ್ನು ಮಾರುವುದರಿಂದ, ನನ್ನ ವಿಷಯವನ್ನು ನೀವು ಸರಿಯಾಗಿ ತಿಳಿದಿರಲಿಕ್ಕಿಲ್ಲ. ನನ್ನ ಹಕೀಮ್ ವಿದ್ಯೆಯನ್ನು ಬಡವರಲ್ಲಿ ಮಾತ್ರ ನಾನು ವಿನಿಯೋಗಿಸುತ್ತೇನೆಯೆ ಹೊರತು ಧನಿಕರಲ್ಲಿ ವೆಚ್ಚಮಾಡುವುದಿಲ್ಲ' ಎಂದೆ.

'ನನ್ನನ್ನು ಈ ರೋಗದಿಂದ ಹೇಗಾದರೂ ಪಾರುಮಾಡಿ, ಹಕೀಮ್ ಸಾಬ್, ಏನು ಬೇಕಾದರೂ ಕೊಡುತ್ತೇನೆ' ಎಂದು ರಂಗಶೆಟ್ಟರು ಮೊರೆ ಇಟ್ಟರು.

'ಹಾಗಾದರೆ ಕೇಳಿ, ಲೈಸನ್ಸಿಲ್ಲದೆ ನನಗೆ ಈ ಊರಿನಲ್ಲಿ ಜೀವನ್ಮೂಲಿಕ ಔಷಧಿಯನ್ನು ಮಾರಲು ಅನುಕೂಲವನ್ನೊದಗಿಸಿ ಕೊಡಬೇಕು. ಇದಕ್ಕೆ ನೀವು ಒಪ್ಪುವುದಾದರೆ ನಿಮ್ಮ ಚಿಕಿತ್ಸೆಯ ವಿಷಯವನ್ನು ಆಲೋಚನೆ ಮಾಡುತ್ತೇನೆ' ಎಂದೆ.

'ಆಗಲಿ, ಆಗತ್ಯವಾಗಿ ಆಗಲಿ. ನೀವು ನಮ್ಮ ಊರಲ್ಲಿ ಲೈಸನ್ಸ್ ಇಲ್ಲದೆ ವೈದ್ಯ ಜರುಗಿಸಬಹುದು; ನಿಮ್ಮ ಜೀವನಿರ್ಮೂಲ ಔಷಧಿಯನ್ನೂ ಮಾರಬಹುದು. ಆದರೆ ನನ್ನನ್ನು ಕೈಬಿಡಬೇಡಿ. ಅಯ್ಯೋ . . ಬಂತೂ . . ತಿರುಗಿ ಬಂತೂ' ಎಂದು ಚೀರಿದರು.

'ನಿಮ್ಮನ್ನು ಗುಣಪಡಿಸಲಿಕ್ಕೆ ನನಗೆ ಐದು ನೂರು ರೂಪಾಯಿ ಕೊಡಬೇಕು. ಇದಕ್ಕೂ ಕಡಿಮೆ ಹಣಕ್ಕೆ ತಂತ್ರಚಿಕಿತ್ಸೆ ಸಾಧ್ಯವಾಗುವುದಿಲ್ಲ. ಆ ರೂಪಾಯಿಗಳೆಲ್ಲವನ್ನೂ ನಾನು ನಮ್ಮ ಗುರುಗಳಿಗೆ ಕಳುಹಿಸಿಕೊಡುತ್ತೇನೆ. ಎರಡೇ ಎರಡು ತಂತ್ರ ಪ್ರಯೋಗದಲ್ಲಿ ನಿಮ್ಮನ್ನು ಸಂಪೂರ್ಣವಾಗಿ ಗುಣ ಮಾಡುತ್ತೇನೆ' ಎಂದು ಭರವಸೆ ಕೊಟ್ಟೆ.

'ಹಾಗೇ ಆಗಲಿ ಹಕೀಮರೆ, ಪ್ರಾಣ ಒಂದು ಉಳಿಸಿ! ಖಂಡಿತಾ ಐನೂರು ರೂಪಾಯಿ ಕೊಡುತ್ತೇನೆ. ನನ್ನ ಜೀವಕ್ಕೆ ಅಷ್ಟು ಕಿಮ್ಮತ್ತಿಲ್ಲವೆ?' ಎಂದು ಶೆಟ್ಟರು ಒರಗೆ ಹಚ್ಚಿದರು.

ನಾನು ಅವರ ಹಾಸಿಗೆಯ ಮೇಲೆ ಕುಳಿತು ಮೊದಲನೆ ಪ್ರಯೋಗ ನಡೆಯಿಸಿದೆ. 'ರಂಗಶೆಟ್ಟರೇ, ಇಲ್ಲಿ ನೋಡಿ . . ನನ್ನ ಕಣ್ಣು ನೋಡಿ; ಮೂಗನ್ನಲ್ಲ . . ಹಾಗೇ . . ಹಾಗೇ ನೋಡ್ತಾ ಇರಿ . . ದಿಟ್ಟಿಸಿ ನೋಡಿ . . ಈಗ ನಿಮ್ಮ ಮನಸ್ಸಿನಲ್ಲಿ ನಾನು ಹೇಳುವುದನ್ನು ಮನನಮಾಡಿಕೊಳ್ಳಿ . . ಹೂಂ . . ನಿಮಗೆ ಖಾಯಿಲೆ ಇಲ್ಲ . . ಇದು ಖಂಡಿತ, ಖಂಡಿತ . . ನಿಮ್ಮಲ್ಲಿ ಏನೂ ಇಲ್ಲ. ರೋಗ, ನೋವು, ಗುಲ್ಮ, ಪಿತ್ತ, ತಲೆ, ಎದೆ, ಮೆದುಳು ಏನೂ ಇಲ್ಲ . . ಇದು ಖಂಡಿತ ಖಂಡಿತ, ಖಂಡಿತ . . ಈಗ ಹೇಳಿ . . ನೋವು ಕಡಿಮೆ ಆಗುತ್ತಾ ಇಲ್ಲವೆ?' ಎಂದು ಕೇಳಿದೆ.

'ಹಾಂ !....ಹೌದು....ನಿಜ....ನೋವು ಕಡಿಮೆ ಆಗುತ್ತಾ ಇದೆ'; ರಂಗಶೆಟ್ಟರು ಸ್ವಪ್ನದಲ್ಲಿದ್ದವರಂತೆ ನಿಧಾನವಾಗಿ ಹೇಳಿದರು. ಅನಂತರ 'ಹಕೀ

ಮರೆ, ಹಾಗೇ ಇನ್ನೆರಡು ಬುರುಡೆ ಬಿಡಿ! ನನ್ನ ಜಠರಾಗ್ನಿ ಚುರುಕಾಗಿದೆ ಅನ್ನಿ. ಆ ಚಪಾತಿಗಳನ್ನು ಮುಗಿಸಿಬಿಡುತ್ತೇನೆ' ಎಂದು ಆಶೆಪಟ್ಟರು.

ಅವರ ದೇಹದ ಮೇಲೆಲ್ಲಾ ನನ್ನೆರಡು ಕೈಗಳನ್ನೂ ಹಾವಿನ ಹೆಡೆಯಂತೆ ಆಡಿಸುತ್ತಾ ಒಂದೆರಡು ತಂತ್ರ ಮಾಡಿ, ಅನಂತರ 'ಈಗ ನೋಡಿ, ಮೈ ಬಾವೆಲ್ಲಾ ಇಳಿದುಹೋಯಿತು. ಜ್ವರವೂ ನಿಂತಿತು. ಹೊಟ್ಟೆಗೆ ತಂಪು. ಕಣ್ಣಿಗೆ ಜಂಪು ಬರುತ್ತಿದೆ.... ನೀವು ಕಣ್ಣು ಮುಚ್ಚದೆ ಇರಲಾರಿರಿ....ಆಂ.... ನೋಡಿ .... ಕಣ್ಣು ಮುಚ್ಚುತ್ತಿದೀರಿ .... ಅಗೋ ನೋಡಿ .... ನಿದ್ದೆ ಬಂತು' ಎಂದು ಸಣ್ಣ ಧ್ವನಿಯಲ್ಲಿ ಮೆಲ್ಲಗೆ ಹೇಳಿದೆ.

ರಂಗಶೆಟ್ಟರು ನಿಧಾನವಾಗಿ ಕಣ್ಣು ಮುಚ್ಚಿದರು. ಅನಂತರ ಗೊರಕೆ ಹೊಡೆಯಲಾರಂಭಿಸಿದರು.

ನಾನು ಆ ಯುವಕನನ್ನು ನೋಡಿ 'ಏನು ಪೆಟ್ಟಣ್ಣಶಟ್ರೆ, ನೋಡಿದಿರಾ ನನ್ನ ತಂತ್ರಚಿಕಿತ್ಸೆಯ ಮಹಿಮೆ? ಈಗ ಮೊದಲನೆಯ ಪ್ರಯೋಗವಾಯ್ತು. ಇನ್ನೊಂದು ಪ್ರಯೋಗಕ್ಕೆ ನಿಮ್ಮ ಭಾವಂದಿರು ಸಂಪೂರ್ಣ ಗುಣ ಹೊಂದುತ್ತಾರೆ. ಯೋಚನೆ ಮಾಡಬೇಡಿ' ಎಂದು ಧೈರ್ಯ ಹೇಳಿದೆ.

'ನನ್ನ ಭಾವನಿಗೆ ಇನ್ನೊಂದು ಪ್ರಯೋಗ ಯಾವಾಗ ಪ್ರಯೋಗಿಸುತ್ತೀರಿ, ಹಲ್ಲೀಬಾನ್ ಹಕೀಮರೆ?' ಎಂದು ಆ ಯುವಕ ಕೇಳಿದ.

'ಅ....ಅಲ್ಲೀ....ಖಾ....ಖಾನ್. ಇನ್ನೊಂದು ಪ್ರಯೋಗವನ್ನು ಈ ದಿನ ರಾತ್ರಿ ಒಂಭತ್ತು ಗಂಟೆಗೆ ಹೂಡುತ್ತೇನೆ. ಎರಡನೆಯದೇ ಮುಖ್ಯ ಪ್ರಯೋಗ. ಇವರು ಈಗ ಎದ್ದಕೂಡಲೆ ಒಂದು ಸೀಶೆ ಜೀವನ್ಮೂಲಿಕಾ ಔಷಧಿ ಕುಡಿಸಿ. ಅದು ಅವರನ್ನು ಎರಡನೆಯ ಪ್ರಯೋಗಕ್ಕೆ ತಯಾರು ಮಾಡುತ್ತದೆ. ಅನಂತರ ನಾಲ್ಕು ತೊಟ್ಟು ಕರ್ಪೂರದ ಎಣ್ಣೆಯನ್ನು ಒಂದು ಸೇರು ಒಣ ಅವಲಕ್ಕಿಗೆ ಬೆರೆಸಿ ತಿನ್ನಿಸಿ ಬಿಡಿ. ಇನ್ನೇನೂ ಆಹಾರ ಕೂಡದು' ಎಂದು ಪಥ್ಯವನ್ನು ವಿಧಿಸಿ, ಒಂದು ಸೀಶೆ ಜೀವನ್ಮೂಲಿಕಾ ಔಷಧಿ ಕೊಟ್ಟು ನನ್ನ ಬಿಡಾರಕ್ಕೆ ಬಂದೆ.

ರಾತ್ರಿ ಒಂಬತ್ತು ಗಂಟೆ ಹೊಡೆಯುವ ಹೊತ್ತಿಗೆ ಅಧ್ಯಕ್ಷರ ಮನೆಗೆ ಪುನಃ ಹೋದೆ. ಊರಿನವರೆಲ್ಲಾ ದೀಪ ಆರಿಸಿ ನಿದ್ದೆಗಾರಂಭಿಸಿದ್ದರು. ಬೀದಿ

ನಿರ್ಜನವಾಗಿತ್ತು. ರಂಗಶೆಟ್ಟರ ಕೊಠಡಿಯಲ್ಲಿ ಮಾತ್ರ ದೀಪ ಉರಿಯುತ್ತಿತ್ತು. ಬಾಗಿಲ ಹತ್ತಿರ ಹೊರಗಡೆ ಆ ಯುವಕ ನಿಂತಿದ್ದ.

'ಏನು ಚಟ್ನಿ ಪುಟ್ರೆ, ಹೇಗಿದೆ ನಿಮ್ಮ ಧನಿಸವರಿಗೆ?' ಎಂದು ವಿಚಾರಿಸಿದೆ.

'ಪುಟ್ಟಣ್ಣಶೆಟ್ಟಿ ಕಣ್ರೀ, ಹೂಂ....ನನ್ನ ಧನಿಸವರಿಗೆ ಸ್ವಲ್ಪ ಉತ್ತಮ, ಇಲೀಖಾನ್ ಸಾಬರೆ' ಎಂದು ಆ ಯುವಕ ಹೇಳಿದ.

'ಹೆಸರು ಅಲ್ಲೀಖಾನ್. ಹೂಂ' ಎಂದು ನಾನು ರಂಗಶೆಟ್ಟರ ಬಳಿಗೆ ಬಂದೆ.

ಅವರ ಮುಖದ ಬಣ್ಣ ಕಾಯಿಲೆಯ ಬಿಳುಪಿನಿಂದ ಮೊದಲಿನ ಕಪ್ಪಿಗೆ ತಿರುಗಿತ್ತು. ನಾಡಿ ಪ್ರತಿಮಾವಿದ ವಿನೀಯುಂತಿತ್ತು. ಇನ್ನೊಂದು ಸಲ ನನ್ನ ಕೈಗಳನ್ನು ಅವರ ಮೇಲಾಡಿಸಿ ಎರಡನೆ ಪ್ರಯೋಗವನ್ನು ಪೂರಯಿಸಿ 'ಅಧ್ಯಕ್ಷ ಶೆಟ್ಟರೆ, ಈಗ ಸಂಪೂರ್ಣವಾಗಿ ಗುಣವಾಗಿದೆ. ನಾಳೆ ನಾಡಿದ್ದು ಎರಡು ದಿನ ಮಾತ್ರ ಹಾಸಿಗೆ ಬಿಟ್ಟು ಏಳಬೇಡಿ. ಏನು ಬೇಕಾದರೂ ತಿನ್ನಿ. ಸದ್ಯ ನಾನು ಈ ಊರಿಗೆ ಬಂದದ್ದು ತಮಗೆ ಬಹಳ ಉಪಕಾರ ಮಾಡಿದಂತಾಯಿತು. ಇಲ್ಲದಿದ್ದರೆ ಇಷ್ಟುಹೊತ್ತಿಗೆ ನೀವು ಅಲ್ಲಾನ ಹತ್ತಿರ ಇರುತ್ತಿದ್ದಿರಿ. ಆದರೆ ಈಗೇಕೆ ಆ ವಿಷಯ? ಶುಭ ವಿಷಯ ಮಾತಾಡೋಣ. ನನ್ನ ಐದು ನೂರು ರೂಪಾಯಿ ದಯವಿಟ್ಟು ಕೊಡಿ' ಎಂದೆ.

ರಂಗಶೆಟ್ಟರು ಯುವಕನ ಕಡೆ ನೋಡಿದರು. ಅವನು ನಸುನಕ್ಕು 'ಹಣ ಕೊಡಬೇಕು. ಹಣ ಕೊಟ್ಟು ರಸೀದಿ ಪಡೆಯಬೇಕು. ಆಗಲೇ ಎಲ್ಲವೂ ಪೂರ್ತಿಯಾಗುತ್ತದೆ' ಎಂದ.

ದಿಂಬಿನ ಕೆಳಗಿದ್ದ ನೂರು ರೂಪಾಯಿಗಳ ಐದು ನೋಟನ್ನು ರಂಗಶೆಟ್ಟರು ತೆಗೆದು ನನಗೆ ಕೊಟ್ಟರು. ನಾನೇ ರಸೀದಿ ಬರೆದುಕೊಟ್ಟೆ.

ಆಗ ರಂಗಶೆಟ್ಟರು ಮಂಚದಿಂದ ಛಂಗನೆ ಹಾರಿ ನೆಲದ ಮೇಲೆ ನಿಂತು, ಆ ಯುವಕನನ್ನು 'ಎಲ್ಲಿ ಇನ್‌ಸ್ಪೆಕ್ಟರೇ, ನಿಮ್ಮ ಕೆಲಸ ಮಾಡಿ ಇನ್ನು. ತಕ್ಸೀರು ಪೂರ್ತಿ ಆಯಿತಲ್ಲ?' ಎಂದರು.

ಪುಟ್ಟಣಶೆಟ್ಟಿ ನನ್ನ ಹೆಗಲ ಮೇಲೆ ಕೈಹಾಕಿ ದರ್ಪದಿಂದ 'ಅಲ್ಲೀ.

ಖಾನ್ ಯಾಸೆ ಕಳ್ಳ ರಾಮು, ನಿನ್ನನ್ನು ದಸ್ತಗಿರಿ ಮಾಡಿದೇನೆ. ಲೈಸನ್ಸಿಲ್ಲದೆ ಔಷಧಿ ಬಿಕರಿ ಮಾಡಿದ್ದೂ, ಅದಕ್ಕೂ ಹೆಚ್ಚಾಗಿ ತಂತ್ರಚಿಕಿತ್ಸೆ ಮಾಡುತ್ತೇನೆಂದು ಮೋಸಮಾಡಿ ರಂಗಶೆಟ್ಟರಿಂದ ಐದು ನೂರು ರೂಪಾಯಿ ಪಡೆಯಲು ಪ್ರಯತ್ನಪಟ್ಟದ್ದೂ ನಿನ್ನ ತಕ್ಸೀರು ಎಂದ.

ನಾನು 'ನೀನು ಯಾರು?' ಎಂದೆ

ರಂಗಶೆಟ್ಟರು ಅಡ್ಡಬಂದು 'ನಾನು ಹೇಳುತ್ತೇನೆ ಕೇಳು, ಅವರು ಯಾರೆಂಬುದನ್ನು. ಅವರು ಬೆಂಗಳೂರು ದಂಡಿನ ಪೋಲೀಸ್ ಇನ್‌ಸ್ಪೆಕ್ಟರು. ನೀನು ಬೆಂಗಳೂರಿಂದ ಕಣ್ಮರೆಯಾಗಿ ಬಂದ ಮೇಲೆ ನಿನ್ನನ್ನು ಹುಡುಕುತ್ತಾ ಬಂದು, ಇಲ್ಲಿ ನಿನ್ನನ್ನು ಗೊತ್ತುಹಚ್ಚಿದರು. ಆದರೆ ಇದುವರೆಗೂ ಸರಿಯಾದ ರುಜುವಾತಿದ್ದ ಮೊಕದ್ದಮೆಯಲ್ಲಿ ನೀನು ಸಿಕ್ಕಿರಲಿಲ್ಲವಾದ್ದರಿಂದ, ಸರಿಯಾದ ರುಜುವಾತನ್ನು ಉಂಟುಮಾಡಲು ನಾವಿಬ್ಬರೂ ಸೇರಿ ನಿನ್ನ ಮೇಲೆ ಈ ತಂತ್ರ ಉಪಯೋಗಿಸಿದೆವು. ತಿಳಿಯಿತೆ?' ಎಂದರು.

'ಪೋಲೀಸ್ ಇನ್‌ಸ್ಪೆಕ್ಟರು!' ಎಂದು ನಾನು ಆಶ್ಚರ್ಯವನ್ನು ಸೂಚಿಸಿದೆ.

'ಹೌದು, ನಿನ್ನನ್ನು ಈ ರಾತ್ರಿಯೇ ಬೆಂಗಳೂರಿಗೆ ಸಾಗಿಸಿ, ಮ್ಯಾಜಿಸ್ಟ್ರೇಟರ ಮುಂದೆ ನಿನ್ನನ್ನು ಜರೂರಾಗಿ ಹಾಜರು ಪಡಿಸಬೇಕಾಗಿದೆ' ಎಂದು ಆ ಯುವಕ ಅಟ್ಟಹಾಸದಿಂದ ಹೇಳಿದ.

ನಾನು ಬಾಗಿಲ ಕಡೆ ನೆಗೆದೆ, ಪಲಾಯನಸೂಕ್ತ ಹೇಳುವುದಕ್ಕೆ. ಆದರೆ ನನಗಿಂತಲೂ ಚುರುಕಾಗಿದ್ದ ಆ ಯುವಕ ನನ್ನನ್ನು ಕೂಡಲೆ ಹಿಡಿದು ಬಂಧಿಸಿ, ಕೈಕೋಳ ತೊಡಿಸಿದ. ಅನಂತರ ನನ್ನ ಜೇಬಿನೊಳಗಿಂದ ನೋಟುಗಳನ್ನು ತೆಗೆದು ಎಣಿಸಿಕೊಂಡು ತನ್ನ ಜೇಬಿನೊಳಗಿಟ್ಟುಕೊಂಡು, ರಂಗಶೆಟ್ಟರಿಗೆ 'ಈ ನೋಟುಗಳನ್ನು ನಾನು ಕೋರ್ಟಿಗೆ ಹಾಜರ್ಪಡಿಸಬೇಕು. ಅಲ್ಲದೆ ಇವನು ನಿಮಗೆ ಬರೆದುಕೊಟ್ಟ ರಸೀದಿಯನ್ನೂ ಕೊಡಿ. ಇವೆರಡನ್ನೂ ಕೋರ್ಟಿನಲ್ಲಿ ರುಜುವಾತಾಗಿ ಉಪಯೋಗಿಸಬೇಕು. ಇವುಗಳಿಗೆ ನಾನು ನಿಮಗೆ ರಸೀದಿ ಕೊಡುತ್ತೇನೆ' ಎಂದು ಹೇಳಿ, ನಾನು ರಂಗಶೆಟ್ಟರಿಗೆ ಕೊಟ್ಟಿದ್ದ ರಸೀದಿಯನ್ನು ತೆಗೆದುಕೊಂಡು, ಅವರಿಗೆ ತಾನು ಬೇರೆ ರಸೀದಿ ಬರೆದುಕೊಟ್ಟು, ನನ್ನನ್ನು ರೈಲಿಗೆ ಕರೆದುಕೊಂಡು ಹೋಗಲು ಅಣಿಯಾದ.

ರಂಗಶೆಟ್ಟರು ತಮ್ಮ ಮೀಸೆ ತಿರುಗಿಸುತ್ತಾ 'ಏನು ಅಲ್ಲೀಖಾನ್ ಹಕೀಮರೆ, ತಮ್ಮ ತಂತ್ರಪ್ರಯೋಗದಿಂದ ಕೈಕೋಳ ಕಿತ್ತುಹಾಕಿ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲವೆ?' ಎಂದು ಹೀಯಾಳಿಸಿದರು.

ನಾನು ಅತ್ಯಂತ ಕೋಪವನ್ನು ತೋರಿಸಿ ಎರಡು ಕೈಯನ್ನೂ ಎತ್ತಿ ರಭಸದಿಂದ ಗಾಳಿಯನ್ನು ಗುದ್ದುತ್ತಾ 'ರಂಗಶೆಟ್ಟರೆ, ಕೇಳಿ ಇಲ್ಲಿ. ಈಗ ನೀವು ನನ್ನನ್ನು ಹಾಸ್ಯಮಾಡಬಹುದು. ಆದರೆ ಇಂದಲ್ಲ ಮುಂದೆಯಾದರೂ ನನ್ನ ತಂತ್ರಶಕ್ತಿಯಲ್ಲಿ ನಿಮಗೆ ನಂಬಿಕೆ ಹುಟ್ಟಬಹುದು' ಎಂದೆ

ಹುಟ್ಟಿತು ಅಂತಲೂ ಕಾಣುತ್ತದೆ; ಇರಲಿ.

ಅನಂತರ ನಾವಿಬ್ಬರೂ ಹೊರಗೆ ಹೊರಟುಹೋದೆವು. ರಂಗಶೆಟ್ಟರ ಮನೆಯ ಪೌಳಿಗೋಡೆ ದಾಟಿದೊಡನೆ ನಾನು 'ಗಿಡ್ಡಪ್ಪ, ಈ ಹಾಳು ಕೈಕೋಳ ತೆಗೆದುಬಿಡೋ. ಯಾರಾದರೂ ಕಂಡರೆ ಫಜೀತಿ ಆದೀತು. ಇನ್ನೂ ಕಾಲು ಗಂಟೆ ಇರಬಹುದು ರೈಲಿಗೆ. ನೋಟುಗಳು ಭದ್ರ. ಜಾಗ್ರತೆ ಈ ಊರಿಂದ ಗಾಡಿ ಬಿಡೋಣ' ಎಂದೆ.

ಹೂಂ....ಹೌದು....ಗಿಡ್ಡಪ್ಪನೇ ಪೋಲೀಸ್ ಇನ್‌ಸ್ಪೆಕ್ಟರಾಗಿ ಬಂದಿದ್ದದ್ದು....ನಾವಿಬ್ಬರೂ ಪಾಲುಗಾರರಾಗಿದ್ದೆವಲ್ಲ!'

—— : ——

Peter as personality.

## ಬಯಸಿದ ಫಲ

ತಿಮ್ಮ, ಪುರೋದ್ಯಾನದ ಕಲ್ಲು ಜಗಲಿಯ ಮೇಲೆ ಹಾಯಾಗಿ ಮಲಗಿ ನಿದ್ದೆಮಾಡುತ್ತಿದ್ದವನು, ಹಾಗೆಯೇ ಎಚ್ಚರಗೊಂಡು ಮೈಮುರಿದು ಹೊರ ಳಾಡಿದ. ತಿಮ್ಮ ಹಾಗೆ ಹೊರಳಾಡಿದರೆ, ನಾಯಿ ಮೈ ಮುದುರಿಕೊಂಡು ಮಲಗಿದರೆ, ಒಣಗಿದ ಸೌದೆಗಾಗಿ ಉಣ್ಣೆಯ ಮೇಲಂಗಿ ಜಾಕೀಟುಗಳಿಗಾಗಿ ಹೆಂಡಂದಿರು ಗಂಡಸರೊಡನೆ ಸವಿಮಾತಿನ ಸಂಧಾನ ಮೊದಲಿಟ್ಟರೆ, ಮಳೆ ಗಾಲ ಪ್ರಾರಂಭ ಎಂದರ್ಥ. ಮಳೆಗಾಲ ಮುಗಿವ ತನಕ ಮಾಮೂಲಾಗಿ ತನಗೆ ಸಿಗುತ್ತಿದ್ದ ಅನ್ನ ಬಟ್ಟೆ ವಸತಿಗಳನ್ನು ಈ ಸಲವೂ ಪಡೆಯಲು ಸರಿ ಯಾದ ಉಪಾಯ ಮಾಡಬೇಕೆಂದು ತಿಮ್ಮ ನಿರ್ಧಾರಮಾಡಿದ.

ನಿರ್ಧಾರವೇನೋ ಆಯಿತು; ಉಪಾಯವೊಂದು ನಿಶ್ಚಯವಾಗಬೇಕಲ್ಲ. ಹೇಗೆ ಮೊದಲಿಡಬೇಕು? ಆ ಯೋಚನೆಯಿಂದಲೇ ತಿಮ್ಮ ಮೈಮುರಿದು ಹೊರಳಾಡಿದ್ದು. ಇಂಥ ಸಂದರ್ಭಗಳಲ್ಲಿ ಅನುಕೂಲವಂತರು ಮಾಡುವ ಯೋಚನೆ ಒಂದನ್ನೂ ತಿಮ್ಮ ಅವರಿಂದ ಕಿತ್ತುಕೊಳ್ಳಲಿಲ್ಲ. ಬೆಚ್ಚಗಿರುವ ಮನೆ ಬಾಡಿಗೆಗೆ ತೆಗೆದುಕೊಳ್ಳುವುದು, ಉಣ್ಣೆಬಟ್ಟೆ ಹೊಲಿಸಿಕೊಳ್ಳುವುದು - ಮುಂತಾದ್ದು ಯಾವುದೂ ತಿಮ್ಮನ ಮನಸ್ಸಿನಲ್ಲಿ ಸುಳಿಯಲಿಲ್ಲ; ಬಲವಾದ ನಾಯಿಯ ಬಳಿ ಬೆಕ್ಕಿನ ಮರಿ ಸುಳಿಯದಿರುವ ಹಾಗೆ.

ತಿಮ್ಮನಿಗೆ ಬೇಕಾದ್ದು ಮೂರು ತಿಂಗಳ ಶಿಕ್ಷೆ! ಸಾದಾ ಸಜಾ. ಆ ಮೂರು ತಿಂಗಳು ಅಂಗಿ ಚಲ್ಲಣ, ಚಾಪೆ ಕಂಬಳಿ, ಹಿಟ್ಟು ಸೊಪ್ಪು, ವಾರ ಕ್ಕೆರಡಾವರ್ತಿ ಮಜ್ಜಿಗೆ, ಎಲ್ಲವೂ ಖಂಡಿತವಾಗಿ ದೊರೆಯುತ್ತವೆ. ಜೈಲಿಗೆ ಹೋಗುವುದೆಂದರೆ ತಿಮ್ಮನ ಪಾಲಿಗೆ ಅಳಿಯ ಮಾವನಮನೆಗೆ ಹೋದಂತೆ. ಸರ ಕಾರವೇ ದಿವಾಳಿಯೆದ್ದರೇನೇ ಹೊರತು ಸಜಾಕಾಲದಲ್ಲಿ ತಿಮ್ಮನಿಗೆ ಹೊಟ್ಟೆಗೂ

ಬಟ್ಟೆಗೂ ಕೊರತೆಯಿಲ್ಲ. ಮಳೆಗಾಲದಲ್ಲಿ ಅಷ್ಟು ಸಿಕ್ಕರೆ ಅವನಿಗೆ ಅದೇ ಸ್ವರ್ಗ. ಆದ್ದರಿಂದ ಪ್ರತಿವರ್ಷ ಮಳೆಗಾಲದಲ್ಲೂ ತಪ್ಪದೆ, ಮಗಳು ತವರು ಮನೆಗೆ ಬರುವಷ್ಟು ಸರಾಗವಾಗಿ ಸಲೀಸಾಗಿ ಏನಾದರೊಂದು ಉಪಾಯ ಮಾಡಿ ಜೈಲಿಗೆ ಬರುತ್ತಿದ್ದ.

ಈ ವರ್ಷವೂ ತಿಮ್ಮನಿಗೆ ಜೈಲಿಗೆ ಹಿಂದಿರುಗುವ ಕಾಲ ಬಂದಿತ್ತು. ಎಂದಿನಂತೆ ಹಳೆಯ ಪತ್ರಿಕೆಗಳನ್ನು ತಂದು ಹೊದ್ದುಕೊಂಡು ಮಲಗಿದ್ದರೂ ಆ ರಾತ್ರಿ ಸ್ವಲ್ಪ ಛಳಿಯಾಗಿ ಅವನಿಗೆ ಎಚ್ಚರವಾಗಿತ್ತು. ಆದ್ದರಿಂದಲೇ ಅವನು ಪ್ರೈಮುರಿದು ಹೊರಳಾಡಿದ್ದು. ಧರ್ಮಕ್ಕಿಂತಲೂ ಜೈಲಿಗೇ ಹೆಚ್ಚು ದಯೆ ಎಂದು ತಿಮ್ಮ ಸ್ವಂತ ಅನುಭವದಿಂದ ಕಂಡುಹಿಡಿದಿದ್ದ. ಆದ್ದರಿಂದಲೇ ಅವನಿಗೆ ಜೈಲು ಎಂದರೆ ಆಸೆ, ಸರಕಾರ ಎಂದರೆ ಭಕ್ತಿ.

ಜೈಲಿಗೆ ಹೋಗುವ ಮನಸ್ಸು ಮಾಡಿದವನು ಮರುದಿನವೇ ಅದಕ್ಕೆ ಉಪಾಯಗಳನ್ನು ಹೂಡಲು ಮೊದಲು ಮಾಡಿದ. ಅದಕ್ಕೆ ದಾರಿ ಬೇಕಾದಷ್ಟು ಇದ್ದವು. ಬಹಳ ಸುಲಭವಾದ ದಾರಿ ಎಂದರೆ 'ಆನಂದ ಭವನ' ಹೋಟೆಲಿನ ಬಳಿ ಹೋಗಿ, ಬೀದಿ ಪಕ್ಕದಲ್ಲಿ ಇಟ್ಟಿರುವ ತಿಂಡಿಗಳಲ್ಲಿ ಒಂದನ್ನು ಲಟಕ್ಕನೆ ತೆಗೆದುಕೊಂಡು ತಿನ್ನುವುದು. ತಿಮ್ಮ ನೇರಾಗಿ 'ಆನಂದ ಭವನ'ಕ್ಕೆ ಬಂದ. ಬಂದು ನಿಂತು ಕ್ಷಣಕಾಲ ತಿಂಡಿಗಳನ್ನು ನೋಡಿ, ಅದರಲ್ಲಿ ದೂಧಫೇಡಾ ಚುನಾಯಿಸಿ, ಬೊಗಸೆ ತುಂಬಾ ಬಾಚಿಕೊಂಡು ಬಾಯಲ್ಲಿ ತುರುಕಿಕೊಂಡ. ತುರುಕಿಕೊಂಡು ಮೆಲ್ಲುತ್ತಾ ಆ ರುಚಿ ಅನುಭವಿಸುತ್ತಾ ಜೈಲಿಗೆ ಹೋಗಲು ಸಿದ್ಧನಾದ. ಪೋಲೀಸಿನವನ ದಾರಿ ನೋಡಿದ. ಗಲಾಟೆಯಾಯಿತು. ಬಾಗಿಲಲ್ಲೇ ಇದ್ದ ಹೋಟಲು ಜವಾನ ತಿಮ್ಮನ ಬೆನ್ನಮೇಲೆ ಎಳೆಂಟು ಏಟುಗಳನ್ನು ಕೊಂಚ ಬಿರುಸಾಗಿಯೇ ಹೊಡೆದ. ತಿಂದ ದೂಧಫೇಡಾ ಕರಗಿತು, ಜೈಲು ಸಿಗಲಿಲ್ಲ!

ಈ ದಾರಿ ಸಾಧಿಸಲಿಲ್ಲ. ಕೈ ಹಿಂದಕ್ಕೆಳೆದುಕೊಂಡು, ಎಟಕಿದಷ್ಟು ಬೆನ್ನನ್ನು ಮೃದುವಾಗಿ ಸವರಿಕೊಳ್ಳುತ್ತಾ ತಿಮ್ಮ ಐದಾರು ಅಂಗಡಿ ದಾಟಿ ಹೋದ. ಒಂದು ಅಂಗಡಿಯಲ್ಲಿ ಮುಂದುಗಡೆ ಗಾಜಿನ ಬೀರುಗಳಲ್ಲಿ ಗಡಿಯಾರಗಳನ್ನು ತುಂಬಿಟ್ಟಿದ್ದರು. ಅವನ್ನು ನೋಡುತ್ತಿದ್ದ ಹಾಗೆಯೇ ತಿಮ್ಮನಿಗೆ ಒಂದು ಉಪಾಯ ಹೊಳೆಯಿತು. ಒಂದು ಕಲ್ಲು ತೆಗೆದುಕೊಂಡು ಆ ಬೀರೂಗೆ

ಹೊಡೆದ. ಫಳ್ ಎಂದು ಗಾಜು ಸೀಳಿತು. ಗಡಿಯಾರಗಳು ಉರುಳಿಬಿದ್ದವು. ಜನ ಗುಂಪು ಸೇರಿದರು. ಆತುರದಿಂದ ಮೇಲುಸಿರು ಬಿಡುತ್ತಾ ಓಡಿಬಂದು, ಬೀಗರನ್ನು ಇದಿರ ಗೊಳ್ಳುವವನಂತೆ ನಸುನಗುತ್ತ ನಿಂತಿದ್ದ ತಿಮ್ಮನನ್ನು ನೋಡಿ, ಪೋಲೀಸಿನವನು 'ಗಾಜು ಒಡೆದವನು ಎಲ್ಲಿ ಓಡಿಹೋದ' ಎಂದು ಕೇಳಿದ.

ಹಲ್ಲು ಕಿರಿಯುತ್ತಾ 'ನಾನೇ ಒಡೆದವನು ಎಂಬುದು ತಿಳಿಯೋದಿಲ್ಲವೆ ?' ಎಂದ ತಿಮ್ಮ.

ಹಾಗೆಲ್ಲಾ ನಂಬುವಂತಿರಲಿಲ್ಲ ಪೋಲೀಸಿನವನು. ಕಳ್ಳನನ್ನು ಪತ್ತೆ ಮಾಡುವ ವಿಧಾನವನ್ನು ಅವನ ಗುರುಗಳು ಕಲಿಸಿದ ರೀತಿಯೇ ಬೇರೆ. ದೂರದಲ್ಲಿ ಯಾರೋ ಓಡಿಹೋಗುತ್ತಿದ್ದುದನ್ನು ನೋಡಿ ಅವನನ್ನು ಅಟ್ಟಿಕೊಂಡು ಹೋದ. ಅಂತೂ ತಿಮ್ಮ ಎರಡನೇ ಸಲ 'ಬೇಸ್ತು' ಬಿದ್ದ.

ಇವಕ್ಕಿಂತಲೂ ಮೇಲಾದ ದಾರಿ ಏನು ಸಿಕ್ಕೀತೋ ಎಂದು ಹುಡುಕುತ್ತಾ ತಿಮ್ಮ ಪೇಟೆ ಚೌಕಕ್ಕೆ ಬಂದ. ಚೌಕದಲ್ಲಿ ಒಬ್ಬ ಹೆಂಗಸು ನಿಂತಿದ್ದಳು. ಪೋಲೀಸಿನವನೂ ಇದ್ದ ಚೌಕದಲ್ಲಿ. ಈ ಸಂದರ್ಭ ಅನುಕೂಲ ಎನ್ನಿಸಿತು ತಿಮ್ಮನಿಗೆ. ಪೋಲೀಸಿನವನಿಗೆ ಕಾಣದ ಹಾಗೆ ಆ ಹೆಂಗಸನ್ನು ಕೀಟಲೆ ಮಾಡಿದರೆ, ಅವಳು ಪೋಲೀಸಿನವನನ್ನು ಕೂಗುತ್ತಾಳೆ ; ಕೂಗಿದರೆ ಮೂರು ತಿಂಗಳು ಅನ್ನ ವಸತಿ ಗಟ್ಟಿ. ಸರಿ, ತಿಮ್ಮ ತನ್ನ ಕೆಲಸವನ್ನು ಪ್ರಾರಂಭಿಸಿದ. ಪೋಲೀಸನಿಗೆ ಕಾಣುವಂತೆ ಠೀವಿಯಿಂದ ಆ ಹೆಂಗಸಿನ ಬಳಿ ಹೋಗಿ ನಿಂತ. ಅವಳ ಕಡೆ ನೋಡಿ ಕೆಮ್ಮಿ ನಸುನಕ್ಕ. ಆ ಹೆಂಗಸು ಅವನನ್ನು ನೋಡಿ ಸ್ವಲ್ಪ ದೂರ ಹೋಗಿ ನಿಂತಳು. ತಿಮ್ಮ ಕಂಗೆಡಲಿಲ್ಲ. ಮತ್ತೆ ಅವಳ ಹತ್ತಿರ ಹೋಗಿ ನಿಂತ. ಪೋಲೀಸು ತಿಮ್ಮನ ಕಡೆ ನೋಡಿದ. ಆದರಿಂದ ತಿಮ್ಮನಿಗೆ ಧೈರ್ಯ ಬಂತು. ಹೆಂಗಸನ್ನು ನೋಡಿ ಕೆಮ್ಮಿ ನಸುನಕ್ಕ. ಆ ಹೆಂಗಸು ತಿಮ್ಮನ ಕಡೆ ನೋಡಿ ಚೌಕದಾಚೆಗೆ ಹೋಗಿ ರಸ್ತೆಯಲ್ಲಿ ನಿಂತಳು. ತಿಮ್ಮ ಅವಳ ಹಿಂದೆಯೇ ಹೋದ. ಪೋಲೀಸನು ದುರುಗುಟ್ಟಿಕೊಂಡು ತಿಮ್ಮನನ್ನು ನೋಡುತ್ತಿದ್ದ. ತನ್ನ ಕೆಲಸ ಕೈಗೂಡಿತೆಂದು ತಿಮ್ಮ ಆ ಹೆಂಗಸಿನ ಬಳಿಗೆ ಬಂದು ವ್ಯಂಗ್ಯವಾಗಿ ನಗುತ್ತಾ 'ಏನು, ಎಲ್ಲಿಗೆ ಹೋಗುತ್ತೀ ?' ಎಂದ. ಆ ಹೆಂಗಸು ಮೆಲ್ಲನೆ, 'ಲೋ ಪೆಂಗೆ, ಪೋಲೀಸಾತ

ನೋಡ್ತಾ ಇದಾನೆ, ಸುಮ್ಮನೆ ಬಾ' ಎಂದು ಮುಂದೆ ಹೊರಟಳು; ತಿಮ್ಮ ಪೆಚ್ಚಾದ! ಮೂರನೇ 'ಬೇಸ್ತು'.

ಸಾಯಂಕಾಲವಾಗುತ್ತ ಬಂದ ಹಾಗೆಲ್ಲ ತಿಮ್ಮನಿಗೆ ಭಯ ಹೆಚ್ಚಿತು. ತನ್ನನ್ನು ದಸ್ತಗಿರಿ ಮಾಡುವವರೇ ಇಲ್ಲವೆ? ಕುಡಿದವರ ಹಾಗೆ ಹುಚ್ಚು ಹುಚ್ಚಾಗಿ ನಟಿಸಿದರೆ ಜೈಲು ಗಿಟ್ಟಬಹುದೆಂದು ಹುಚ್ಚಾಟ ಆರಂಭಿಸಿದ. ದಾರಿಯಲ್ಲಿ ಗಟ್ಟಿಯಾಗಿ ಹಾಡಿದ, ಕುಣಿದ, ತೂರಾಡಿದ. ಪೋಲೀಸನು ಬಂದು ತಿಮ್ಮನನ್ನು ರೆಟ್ಟೆಹಿಡಿದು ದರದರ ಎಳೆದುಕೊಂಡು ಹೋಗಿ "ಲೋ ಪಾಪಿ, ನಿಮ್ಮಂಥವರನ್ನು ಜೈಲಿಗೆ ಹಾಕಲಿಕ್ಕೆ ನನಗೆ ಮನಸ್ಸೇ ಬರುವುದಿಲ್ಲ. ನಾನೂ ಕುಡೀತೀನಿ; ಆದಕ್ಕೇ ಬಿಟ್ಟಿದೀನಿ. ಗಲಾಟೆಮಾಡದೆ ಹೊರಟು ಹೋಗು' ಎಂದು ಬುದ್ಧಿ ಹೇಳಿ ಹೊರಟುಹೋದ. ತಿಮ್ಮನಿಗೆ ದಿಕ್ಕೇ ತೋಚ ದಂತಾಯಿತು. ಪೋಲೀಸರೂ ಇಷ್ಟು ಕೆಟ್ಟುಹೋದರೆ ಮುಂದೇನು ಗತಿ! ಚಿಂತಿಸುತ್ತಾ ದೊಡ್ಡಪೇಟೆಗೆ ಬಂದ.

ಅಲ್ಲೊಂದು ಚಿಕ್ಕ ಸಿಗರೇಟು ಅಂಗಡಿ. ಅಲ್ಲಿ ಸಿಗರೇಟು ಕೊಳ್ಳಲು ಬಂದಿದ್ದ ಗಿರಾಕಿಯೊಬ್ಬ ಪಕ್ಕದ ಗೋಡೆಗೆ ತನ್ನ ಛತ್ರಿ ಒರಗಿಸಿ ಜೇಬಿನಿಂದ ಚಿಲ್ಲರೆ ತೆಗೆಯುತ್ತಿದ್ದ. ಜೈಲಿಗೆ ಹೋಗಲು ಇನ್ನೂ ದಾರಿಯಿದೆ ಎನಿಸಿತು ತಿಮ್ಮನಿಗೆ. ಆ ಛತ್ರಿಯನ್ನು ತೆಗೆದು ಕಂಕುಳಲ್ಲಿಟ್ಟುಕೊಂಡು ಹೋದ. ಛತ್ರಿ ಯವನು ಗಟ್ಟಿಯಾಗಿ ಕೂಗುತ್ತಾ ತಿಮ್ಮನ ಹಿಂದೆ ಬಂದು 'ಏ, ಛತ್ರಿ ನನ್ನದು' ಎಂದ. ತಿಮ್ಮ ಅಣಕಿಸುವಂತೆ 'ನಿನ್ನದೇ ಛತ್ರಿ? ಪೋಲೀಸನ್ನ ಕೂಗು ನೋಡೋಣ, ನಿನ್ನದಲ್ಲವೆ ಛತ್ರಿ!' ಎಂದ.

ಆ ಛತ್ರಿಯ ಮನುಷ್ಯ ಸ್ವಲ್ಪ ಗಾಬರಿಗೊಂಡು 'ಕ್ಷಮಿಸಯ್ಯ ಕ್ಷಮಿಸು, ಇದಕ್ಕೆ ಪೋಲೀಸು ಯಾಕೆ? ನೋಡಪ್ಪ, ನಮ್ಮಿಬ್ಬರ ಛತ್ರಿಗಳೂ ಒಂದೇ ತರ. ಈಗ ಒಂದು ಗಂಟೆ ಕೆಳಗೆ ನನ್ನ ಛತ್ರಿ ಎಲ್ಲೋ ಕಳೆದುಹೋಯ್ತು. ಹುಡುಕುತ್ತಾ ಬಂದೆ. ದಾರಿಯಲ್ಲಿ ನಿನ್ನದು ಬಿದ್ದಿತ್ತು. ನನ್ನದೇ ಅಂತ ತೆಗೆದುಕೊಂಡು ಹೊರಟೆ. ಅಷ್ಟಕ್ಕೆ ಪೋಲೀಸಿನವನು ಏಕೆ?' ಎಂದು ಹೇಳಿ ಅವಸರ ಅವಸರವಾಗಿ ಹೊರಟುಹೋದ. ತಿಮ್ಮನಿಗೆ ಬಹಳ ಜುಗುಪ್ಸೆ ಯಾಯಿತು. ಛತ್ರಿಯನ್ನು ಚರಂಡಿಯಲ್ಲಿ ಹಾಕಿ ಕೋಟೆ ಕಡೆ ಹೊರಟ.

ಕೋಟೆ ಆಂಜನೇಯನ ಗುಡಿಯ ಮುಂದೆ ಭಕ್ತಾದಿಗಳು ಓಡಾಡು ತ್ತಿದ್ದರು. ಒಳಗೆ ಪೂಜಾರ್ಚನೆ ನಡೆಯುತ್ತಿತ್ತು. ಹುಡುಗರು ದೊಡ್ಡವರು, ಹೆಂಗಸರು, ಮಕ್ಕಳು ದೇವರ ದರ್ಶನಕ್ಕೆ ಭಕ್ತಿಯಿಂದ ಬರುತ್ತಿದ್ದರು. ವೇದ ಘೋಷ ಇಂಪಾಗಿತ್ತು. ತಿಮ್ಮ ಅದನ್ನೆಲ್ಲ ನೋಡುತ್ತ ಕೇಳುತ್ತ ಅಲ್ಲೇ ನಿಂತ. ಗುಡಿಯ ಘಂಟಾನಾದ ತಿಮ್ಮನ ಹೃದಯವನ್ನು ಸಂತೈಸಿತು. ಸಂಜೆಯ ತಂಗಾಳಿ ಮೆಲ್ಲನೆ ಬೀಸಿ ತಿಮ್ಮನ ದಣಿವನ್ನು ಪರಿಹರಿಸಿ ಅವನನ್ನು ಹೊಸ ಮನುಷ್ಯನನ್ನಾಗಿ ಮಾಡಿತು. ಹೊರಗಡೆ ಮಕ್ಕಳು ನಗುತ್ತಾ ಆಡು ತ್ತಿದ್ದರು.

ಇವೆಲ್ಲವೂ, ಆ ದುಃಖ ತುಂಬಿದ ಹೃದಯವನ್ನು ಮನಸ್ಸನ್ನು ಕಲಕಿ ಹೊಸ ಅನುಭವ ಕೊಟ್ಟಿತು. ಪ್ರಸಾದವೆಂದು ಯಾರೋ ಅವನ ಕೈಯಲ್ಲಿ ತಿಂಡಿ ಹಾಕಿದರು. ತಿಮ್ಮ ಅದನ್ನು ತಿಂದ. ಘಂಟಾನಾದ ಅಲೆಯಲೆಯಾಗಿ ಮೇಲೆ ಹಾಯ್ದು ಅವನ ಮನಸ್ಸನ್ನು ಒಲಿಸಿತು. ಆ ನಾದಬ್ರಹ್ಮದ ಆನಂದ ದಲ್ಲಿ ಅವನು ಪರೆ ಕಳೆದ ಹಾವಾದ. ಹೊಸ ಸ್ಫೂರ್ತಿಯೊಂದು ಅವನನ್ನು ಆಕ್ರಮಿಸಿತು. ಆಲೋಚನೆಗಳು ಒಳಗಿಂದ ಕಿತ್ತುಕೊಂಡು ಬಂದವು. ತಾನು ಬದುಕುವ ರೀತಿ ಅಸಹ್ಯ; ಸರಿಯಲ್ಲ. ತಾನೂ ಗುಡಿಗೆ ಹೋಗಬಾರದೆ? ಆ ಭಕ್ತಾದಿಗಳಲ್ಲಿ ಆ ಮಕ್ಕಳಲ್ಲಿ ಸೇರಬಾರದೆ? ಅದು ಸಾಧ್ಯವಿಲ್ಲವೆ? ಕಳ್ಳ ತನ ಬಿಟ್ಟರೆ ಬೇರೆ ಕಸಬೇ ತನಗೆ ಇಲ್ಲವೆ? ಜೈಲಿಲ್ಲದಿದ್ದರೆ ಉಪವಾಸವೇ ಗತಿಯೆ.... ?'

ವಿಚಾರದ ಸೆಳವಿನಲ್ಲಿ ತಿಮ್ಮ ಮುಂದೆ ಹರಿದು ಹೋದ. ಛೀ! ಕಳ್ಳ ತನ ಸುಡಲಿ. ತನ್ನ ಜನ್ಮಕ್ಕೆ ಧಿಕ್ಕಾರ! ಇನ್ನು ಮುಂದೆ ಬೇರೆ ರೀತಿಯಾಗಿ ಬಾಳಬೇಕು. ಗಂಡಸಿನಂತೆ ದುಡಿದು ತಿನ್ನಬೇಕು; ತಲೆಯೆತ್ತಿ ತಿರುಗ ಬೇಕು.

ಇನ್ನೆಂದೂ ಕಳ್ಳತನ ಮಾಡುವುದಿಲ್ಲವೆಂದು ತಿಮ್ಮ ಆಣೆಯಿಟ್ಟ. ದೇವರನ್ನೂ ಮನಸ್ಸಿನಲ್ಲೇ ಮೊಕ್ಕಿದ. ದೇವರೇ ತನಗೆ ಜ್ಞಾನೋದಯ ಮಾಡಿಸಿದನೆಂದು ತಿಳಿದ. ಭಕ್ತಿಯಿಂದ ಮೈ ಪುಳಕಿತು. ಅಂದಿನಿಂದ ತಾನು ಹೊಸ ಮನುಷ್ಯನಾದೆ ಎಂದುಕೊಂಡ. ಇನ್ನು ಮುಂದೆ ಜೈಲುವಾಸ ಇಲ್ಲ, ಬೇಕಿಲ್ಲ. ಕೂಲಿಮಾಡಿ ಗುಡಿಸಲು ಕಟ್ಟಿಕೊಂಡು ಅದರಲ್ಲಿ ವಾಸ-

ಹೆಚ್ಚಾಗಿ ಕೂಲಿ ಸಂಪಾದಿಸಿ ಮದುವೆ....ಹೆಂಡತಿ....ಸಂಸಾರ....ಮಕ್ಕಳು....'

ಯಾರೋ ಚಿಟ್ಟನೆ ಚೀರಿದರು. ಕಳ್ಳಕಳ್ಳ ಎಂದು ಹೆಂಗಸರು ಹಲವರು ಕೂಗಿದರು. ತಿಮ್ಮನಿಗೆ ಎಚ್ಚರವಾಯಿತು. ಮನಃಪೂರ್ವಕವಾಗಿ ಅಲ್ಲ ದಿದ್ದರೂ ಅಭ್ಯಾಸವಶವಾಗಿ ತಿಮ್ಮನ ಕಾಲೂ ಕಣ್ಣೂ ಅವನನ್ನು ಒಂದು ಬಂಗಲೆಯ ಹಿಂದೆ ಕತ್ತಲು ಸ್ಥಳದಲ್ಲಿ ತಂದುಬಿಟ್ಟಿದ್ದವು. ತನಗೆ ತಿಳಿಯದೆಯೆ ಅವನು ಒಂದು ಮನೆಯೊಳಗೆ ಹೊಕ್ಕಿದ್ದ. ಹಿತ್ತಿಲು ಕಡೆಗೆ ಬಂದು ಕಿಟಕಿಯ ಕಂಬಿಗಳನ್ನು ಹಿಡಿದು ನಿಂತಿದ್ದ.

ಗಲಾಟೆಯನ್ನು ಕೇಳಿ ನಾಲ್ಕಾರು ಜನ ಬಂದು ಕೂಡಿದರು. ಅವರಲ್ಲಿ ಒಬ್ಬ ಪೋಲೀಸು. 'ಏನು ಮಾಡುತ್ತೀದೀಯೋ ಇಲ್ಲಿ?' ಎಂದು ಅವನು ತಿಮ್ಮನನ್ನು ಕೇಳಿದ. ಹೆಮ್ಮೆಯಿಂದ ತಲೆಯೆತ್ತಿ 'ಏನೂ ಇಲ್ಲ' ಎಂದ ತಿಮ್ಮ. ಆ ಹೆಮ್ಮೆಯನ್ನು ಕೇಳುವವರಾರು....?

ಮರುದಿವಸವೇ ನ್ಯಾಯಾಧೀಶ ತೀರ್ಪು ಕೊಟ್ಟ. ಕಳವು ಮಾಡುವ ಉದ್ದೇಶದಿಂದ ಮನೆ ಬಳಿ ಸಂಚುಹಾಕಿದ್ದಕ್ಕೆ ತಿಮ್ಮನಿಗೆ ಮೂರು ತಿಂಗಳು ಕಠಿನ ಶಿಕ್ಷೆ!

---

Cop and the Anthem.

# ಕನ್ನಡ ಪುತ್ರ

ಎಂದಿನಂತೆ ಆ ಸಂಜೆಯೂ ಆ ಉದ್ಯಾನದ ಫಲಾಹಾರ ಮಂದಿರ ಗಿರಾಕಿಗಳಿಂದ ತುಂಬಿದೆ. ಗ್ರಾಮಾಫೋನಿಗೆ ವಿಶ್ರಾಂತಿಯೇ ಇರಲಿಲ್ಲ. ಗುಂಯ್ ಅನ್ನುತ್ತಲೇ ಇದೆ. ಮೂಲೆಯಲ್ಲಿದ್ದ ಸಣ್ಣದೊಂದು ಮೇಜು ಯಾರ ಗಮನಕ್ಕೂ ಬಂದಿರಲಿಲ್ಲ ಖಾಲಿಯಾಗಿತ್ತು. ನಾನು ಹೋಗಿ ಅದರ ಹತ್ತಿರ ಕುಳಿತುಕೊಂಡೆ. ನನ್ನ ಪಕ್ಕದಲ್ಲಿದ್ದ ಇನ್ನೆರಡು ಕುರ್ಚಿ ತಮ್ಮ ಬಾಹು ಗಳಿಂದ ಬಂದವರೆಲ್ಲರಿಗೂ ಸ್ವಾಗತವೀಯುತ್ತಿದ್ದರೂ, ಆ ಮರ್ಯಾದೆಯನ್ನು ಸ್ವೀಕರಿಸಲು ಯಾರೂ ಮನಸ್ಸು ಮಾಡಿದಂತಿರಲಿಲ್ಲ.

ಸ್ವಲ್ಪ ಹೊತ್ತಿನಲ್ಲಿಯೆ ಆ ಎರಡು ಕುರ್ಚಿಗಳಲ್ಲಿ ಒಂದರಲ್ಲಿ, ಅಪರಿಚಿತ ರೊಬ್ಬರು ಆ ಕುರ್ಚಿಯ ಆದರವನ್ನು ಸ್ವೀಕರಿಸಿ, ಕುಳಿತುಕೊಂಡರು. ಅವರು ಕನ್ನಡಿಗರು.

ನಾವಿದ್ದ ಸನ್ನಿವೇಶಗಳನ್ನು ತಾವು ದಯೆಯಿಟ್ಟು ಕಲ್ಪಿಸಿಕೊಳ್ಳಬೇಕು. ಕರ್ನಾಟಕದಲ್ಲೆಲ್ಲಾ ಸುಪ್ರಸಿದ್ಧವಾದುದು ಆ ಉದ್ಯಾನ. ಅದರಲ್ಲಿಯ ಫಲಾ ಹಾರ ಮಂದಿರ; ಗ್ರಾಮಾಫೋನಿನ ಗದ್ದಲ; ಬಿಳಿಯ ಕಲ್ಲನ್ನು ಹಾಸಿದ ಮೇಜು ಗಳು; ಮೇಜಿನ ಸುತ್ತಲೂ ಉಪಾಹಾರ ಸೇವಿಸುತ್ತಿರುವ ಜನ. ಕರ್ನಾಟಕದ ನಾನಾ ಭಾಗಗಳಿಂದ ಉದ್ಯಾನಕ್ಕೆ ವಿಹಾರಾರ್ಥವಾಗಿ ಬಂದ ಕನ್ನಡಿಗರು ಅಲ್ಲಿ ಫಲಾಹಾರಕ್ಕೆ ಬಂದು ಕುಳಿತಿದ್ದರು. ತಮ್ಮ ಊರಿನವರು ಅಥವಾ ಊರ ಕಡೆಯವರು ಯಾರಾದರೂ ಸಿಕ್ಕಾರೇನೋ ಎಂಬ ಅಭಿಮಾನಪೂರ್ಣ ವಾದ ಕುತೂಹಲದಿಂದ ಸುತ್ತಲಿನ ಜನಸಂದಣಿಯನ್ನು ಒಳಹೊಕ್ಕು ನೋಡುತ್ತಿದ್ದರು. ಇಷ್ಟರ ಮೇಲೆ ಎಲ್ಲರನ್ನು ನಲಿಯಿಸುವ ಉಪಾಹಾರ, ಪಾನೀಯ ಇತ್ಯಾದಿ.

ನನ್ನ ಪಕ್ಕದಲ್ಲಿ ಬಂದು ಕುಳಿತಿದ್ದವರನ್ನು ನಿಟ್ಟಿಸಿ ದಿಟ್ಟಿಸಿ ನೋಡಿದೆ. ಅವರು ಉಟ್ಟ ತೊಟ್ಟ ಬಟ್ಟೆಗಳು ನನ್ನ ಮನಸ್ಸನ್ನು ಸೆಳೆದವು. ಅವುಗಳಲ್ಲಿ ಏನೋ ಒಂದು ವೈಶಿಷ್ಟ್ಯ ಎದ್ದು ಕಾಣುತ್ತಿದ್ದರೂ, ಏನು ಆ ವೈಶಿಷ್ಟ್ಯ ಎಂಬುದನ್ನು ಕಂಡುಹಿಡಿಯಲಿಕ್ಕಾಗಲಿಲ್ಲ. ಅಂತು ನನಗೆ ಒಂದು ಬಗೆಯಿಂದ ಅದೊಂದು ಸೋಜಿಗವೆಂದೇ ಕಂಡುಬಂತು. ಅವರ ಪರಿಚಯಮಾಡಿ ಕೊಳ್ಳುವ ಬಯಕೆ ಮೂಡಿ, ಆ ಚಾಪಲ್ಯ ತೃಪ್ತಿಗಾಗಿ ನಾನು ಅವರನ್ನು ಕೇಳಿದೆ:

"ತಾವು ಯಾವ ಕಡೆಯವರು ?"

ನನ್ನ ಪ್ರಶ್ನೆ ಬಹಳ ಕೀಳುತರಗತಿಯದು ಎಂಬುದನ್ನು ಸೂಚಿಸುವ ತಿರಸ್ಕಾರ ಧ್ವನಿಯಿಂದ ಆ ಅಪರಿಚಿತರು ನುಡಿದರು :

"ಯಾವ ಕಡೆ.... ಯಾವ ಕಡೆಯಾದರೇನು? ನಾನು ಯಾವ ಕಡೆ ಯವನೂ ಅಲ್ಲ ! ಕರ್ನಾಟಕದಲ್ಲಿ ಆ ಕಡೆ ಈ ಕಡೆ ಎಂಬ ಭೇದವಿಲ್ಲ; ಒಂದು ಅವಿಚ್ಛಿನ್ನ ಪೂರ್ಣತೆ ಇದೆ ಕರ್ನಾಟಕಕ್ಕೆ. ಕರ್ನಾಟಕದ ಘಟನೆ ಗಳನ್ನು ಪ್ರಸ್ತಾಪಿಸುವಾಗ ಅವು ಅಖಿಲ - ಅಖಿಲ ಕರ್ನಾಟಕಕ್ಕೆ ಸಂಬಂಧ ಪಟ್ಟವೇ ಆಗಿರಬೇಕು, ಹಾಗೆಂದು ತಿಳಿದುಕೊಳ್ಳಬೇಕು. ನೀರಿನ ಮೇಲೆ ನೀರು ಹರಡುವಂತೆ ಕರ್ನಾಟಕದಲ್ಲಿ ನಡೆಯುವ ಪ್ರತಿಯೊಂದು ವಿದ್ಯ ಮಾನವೂ ಕರ್ನಾಟಕಕ್ಕೆಲ್ಲಾ ಪಸರಿಸಬೇಕು. ಇಲ್ಲದಿದ್ದರೆ ಆ ಬಗ್ಗೆ ಮಾತೇ ಕೂಡದು. ಯಾವುದೊಂದು ಪ್ರಾಂತದ, ಕಡೆಯ, ಊರಿನ, ಸಂಕು ಚಿತ ದುರಭಿಮಾನ ನನಗಿಲ್ಲ !"

ನನಗೆ ಬಹಳ ಆಶ್ಚರ್ಯವೇ ಆಯಿತು. ಆ ಭಾಗದ ಈ ಭಾಗದ, ಉತ್ತರ ದಕ್ಷಿಣದ, ಪೂರ್ವ ಪಶ್ಚಿಮದ, ಹಳೆಯ ಗುಂಪಿನ ಹೊಸ ಗುಂಪಿನ, ನ ಪಕ್ಷದ ಣ ಪಕ್ಷದ, ಆ ಜಾತಿಯ ಈ ಜಾತಿಯ, ಬ್ರಾಹ್ಮಣ ಅಬ್ರಾಹ್ಮಣ ಎಂದು ಹುಮ್ಮಸ್ಸಿನಿಂದ ಅಹೋರಾತ್ರಿ ಹೋರಾಡುತ್ತಿರುವ ಈ ಕ್ರಾಂತಿ ಕಾಲ ದಲ್ಲಿ, ಪೂರ್ಣವಾದ ಅಖಿಲ ಕರ್ನಾಟಕದವನೆಂದು ಪೂರ್ಣ ಕರ್ನಾಟಕದ ಹಿರಿಯ ಹೆಮ್ಮೆಯನ್ನೇ ಹಿಡಿದೆತ್ತಿ, ಒಳ ವಿಭಾಗಗಳನ್ನೂ ಪಂಗಡಗಳನ್ನೂ ಮರೆತಿರುವ ಕನ್ನಡಿಗನನ್ನು ನಾನು ಕಂಡದ್ದು ಅದೇ ಮೊದಲು ! ಅದುವರೆಗೂ ಅರ್ಥವಾಗದಿದ್ದ ಅವರ ಬಟ್ಟೆಗಳ ವೈಶಿಷ್ಟ್ಯ ಅವರು ಅಷ್ಟು ಮಾತನಾಡಿದ

ಮೇಲೆಯೆ ನನಗೆ ಹೊಳೆದದ್ದು. ಮೈಸೂರಿನ ರುಮಾಲು, ಧಾರವಾಡದ ಕಸೆ ಅಂಗಿ, ಮಂಗಳೂರಿನವರ ಪಂಚೆ, ಮದ್ರಾಸಿನ ಕಡೆಯ ವಲ್ಲಿ – ಇದು ಅವರ ವೇಷ.

ನಮ್ರತೆಯಿಂದ ಅವರನ್ನು "ತಮ್ಮ ಹೆಸರೇನು?" ಎಂದು ಕೇಳಿದೆ.

"ಈಗ್ಯೆ ಮೂರು ವರ್ಷದ ಕೆಳಗೆ ನಾನು ಅಖಿಲಕರ್ನಾಟಕ ಏಕೀಕರಣ ಸೇವಾವ್ರತವನ್ನು ಸ್ವೀಕರಿಸಿ, 'ಕನ್ನಡ ಪುತ್ರ' ಎಂದು ನಾಮಕರಣ ಮಾಡಿಕೊಂಡಿದ್ದೇನೆ. ಅದರ ಹಿಂದಿನ, ಪೂರ್ವಾಶ್ರಮದ ಹೆಸರು, ಕುಲ, ಗೋತ್ರ, ಜಾತಿ, ಮತ, ಊರು, ಪ್ರಾಂತ, ಕಡೆ, ಎಲ್ಲವನ್ನೂ ಮರೆತಿದೇನೆ" ಎಂದರು ಅವರು.

ನನ್ನ ಕುತೂಹಲವೂ ಭಕ್ತಿಯೂ ಶತಗುಣವಾದವು. ಅವರೊಡನೆ ದೊಡ್ಡ ಸಂಭಾಷಣೆಯನ್ನೇ ಬೆಳೆಸಿದೆ. ತಮ್ಮ ಧ್ಯೇಯ ಅಖಿಲಕರ್ನಾಟಕದ ಏಕೀಕರಣವೆಂದು ಅವರು ಸಾರಿ ಸಾರಿ ಹೇಳಿದರು. ಚೋಟುದ್ದ ಇರುವ ಕರ್ನಾಟಕದಲ್ಲಿ ಒಳಪಂಗಡಗಳಿಗೆ ವಿಭಾಗಗಳಿಗೆ, ಒಳಹೋರಾಟಕ್ಕೆ, ಅಂತಃಕಲಹಕ್ಕೆ ಎಡೆ ಇದ್ದುದಕ್ಕಾಗಿ ಅತ್ಯಧಿಕ ವ್ಯಸನವನ್ನು ಸೂಚಿಸಿದರು. ಅವನ್ನೆಲ್ಲಾ ಖಂಡಿಸಿದರು. ಅಖಿಲ ಕರ್ನಾಟಕವನ್ನು ಹಿಡಿದೆತ್ತಿ ತಮ್ಮ ಅಂಗೈಯಲ್ಲಿ ಇಟ್ಟುಕೊಳ್ಳುವವರಂತೆ, ಒಂದು ತರದ ಅಸಡ್ಡೆಯಿಂದ, ಇಂಥ ಚಿಕ್ಕ ಪ್ರದೇಶದಲ್ಲಿ ಇವುಗಳಿಗೆಲ್ಲಾ ಸ್ಥಳವಿದೆಯೋ ಎಂದು ಆಶ್ಚರ್ಯಪಟ್ಟರು. ಸಾಂಗ್ಲಿಯಿಂದ ಉದಕಮಂಡಲದಾಚೆ, ಮಂಗಳೂರಿನಿಂದ ಮದ್ರಾಸಿನ ಹತ್ತಿರದವರೆಗೆ, ಹಕ್ಕಿಯೋಪಾದಿಯಲ್ಲಿ ಈ ಪ್ರದೇಶವೆಲ್ಲವೂ ಒಂದೇ ಊರೆಂಬಂತೆ ಹಾರಾಡಿದರು. ಒಂದೊಂದು ಕ್ಷಣಕ್ಕೆ ಒಂದೊಂದು ವಿಧದ ಸಾಮಾನನ್ನು ತನ್ನ ಚೀಲದಿಂದ ತೆಗೆಯುವ ಮಂತ್ರವಾದಿಯಂತೆ ಕನ್ನಡ ಪುತ್ರರು, ಒಂದೊಂದು ಸಲಕ್ಕೆ ಒಂದೊಂದು ಊರಿನ ವಿವಿಧ ವಿಷಯವನ್ನೆತ್ತಿ ಅವೆಲ್ಲವೂ ಒಂದೇ ಊರಿನ ಬೀದಿಗಳೆಂಬಂತೆ ಮಾತನಾಡಿದರು. ಬೆಂಗಳೂರಿನ ಲಾಲ್‌ಬಾಗು, ಮೈಸೂರಿನ ಲಲಿತಾದ್ರಿ, ಗೇರುಸೊಪ್ಪದ ಜಲಪಾತ, ಧಾರವಾಡದ ದಿವಾಕರರು, ಸಾಂಗ್ಲಿಯ ಕಾಲೇಜು, ಮಂಗಳೂರಿನ ತೆಂಗಿನ ಮರಗಳು, ಕಾರವಾರದ ಕಡಲಕರೆ, ಎಲ್ಲವೂ ತಮ್ಮದೆಂಬಂತೆ, ತಾವು ಅವುಗಳಿಲ್ಲದರವರಂತೆ, ಒಡಕಿಲ್ಲದೆ ಹುರುಕಿಲ್ಲದೆ, ಭೇದವಿಲ್ಲದೆ, ಪೂರ್ಣವಾದ

ಹೆಮ್ಮೆಯಿಂದ, ಸಮಾನವಾದ ಮಮಕಾರದಿಂದ, ಎಲ್ಲಾ ವಿಷಯವನ್ನೂ ಪ್ರಸ್ತಾಪಿಸಿದರು ; ತಮ್ಮ ಮನೆಯ ಬೇರೆ ಬೇರೆ ಕೋಣೆಗಳ ವಿಷಯಗಳನ್ನು ಹೇಳುವಂತೆ, ಹೆತ್ತತಾಯಿ ತನ್ನ ಎಲ್ಲಾ ಮಕ್ಕಳಲ್ಲೂ ಸಮಾನ ವಾತ್ಸಲ್ಯವಿಡುವಂತೆ. ಅವರು ಆಡಿದ ಮಾತು ಕೇಳಿದರೆ ಅವರಿಗೆ ಪತ್ರಬರೆವವರು, “ಕನ್ನಡ ಪುತ್ರ, ಕರ್ನಾಟಕ” ಎಂದು ವಿಳಾಸ ಬರೆದರೂ ಆ ಪತ್ರ ಅವರ ಕೈಸೇರುತ್ತಿತ್ತೆಂದು ತೋರುತ್ತದೆ. ಕರ್ನಾಟಕ ಜನ್ಮವೆತ್ತಿದಂದಿನಿಂದ ನೈಜವಾದ, ಶುದ್ಧವಾದ, ಅಂತರ್ವಿಭಾಗದ ಸೋಂಕು ಕೊಂಚಮಾತ್ರವೂ ಇಲ್ಲದ, ಪೂರ್ಣ ಕನ್ನಡಿಗ ಎಂದರೆ ಈ ಮಹಾನುಭಾವನೇ, ಈತನೊಬ್ಬನೇ....ಎಂಬ ದೃಢನಂಬಿಕೆ ನನ್ನಲ್ಲಿ ಉತ್ಪನ್ನವಾಯಿತು. ಆದುದರಿಂದಲೇ ಅವರು ಮಾತನಾಡುತ್ತಿರುವಾಗ, ಅಕಸ್ಮಾತ್ ಒಂದು ಒಡಕಿನ-ಒಂದು ಪ್ರಾಂತದ ಹೆಮ್ಮೆ, ಒಂದು ಭಾಗದ ವಾತ್ಸಲ್ಯ ಛಾಯೆಯಾಗಿ ಕಂಡುಬಂದು, ನನ್ನ ಆ ನಂಬಿಕೆಯನ್ನು ಎಲ್ಲಿ ತಪ್ಪಿಸುತ್ತದೆಯೋ ಎಂಬ ಭಯವೂ ತಲೆದೋರಿತು. ಆದರೆ ಆ ತರದ ಶಂಕೆಗೆ ಕಾರಣವೇ ಇರಲಿಲ್ಲ. ಅವರ ಮಾತು. ಅಭಿಪ್ರಾಯ, ಹೆಮ್ಮೆ–ಆನಂದ, ಅಭಿಮಾನ–ವಿಶ್ವಾಸ, ಸ್ಫೂರ್ತಿ–ಆಗ್ಗಳಿಕೆ, ಅಖಿಲ ಕರ್ನಾಟಕದವೇ ಆಗಿರುತ್ತಿದ್ದವಲ್ಲದೆ ಒಂದು ಪ್ರಾಂತದ, ಒಂದು ಕಡೆಯ, ಊರು, ಮನೆಯದಾಗಿರಲಿಲ್ಲ. ಅಖಿಲ ಕರ್ನಾಟಕದ ಹೆಮ್ಮೆಯ ಚರಿತ್ರೆ ಎಂಬ ಪುಸ್ತಕವನ್ನು ಬರೆದು ನನ್ನ ಊರಿಗೆ ಎಂದು ಅರ್ಪಣೆಮಾಡಿ ‘ಆಚಾರ–ಬದನೆಕಾಯಿ’ ಶಾಸ್ತ್ರವನ್ನು ಅನುಸರಿಸಿದ್ದ ಗ್ರಂಥಕರ್ತರು ಕನ್ನಡ ಪುತ್ರರನ್ನು ಕಂಡಿದ್ದರೆ, ನಾಚಿ ಬೊಟ್ಟು ಕಚ್ಚಿಕೊಳ್ಳುತ್ತಿದ್ದರು.

ನಮ್ಮ ಪಕ್ಕದಲ್ಲಿದ್ದ ಇನ್ನೊಂದು ಕುರ್ಚಿಯನ್ನು ತುಂಬಿ ಕುಳಿತ ಆಗಂತುಕನೊಬ್ಬನ ಆಗಮನ ನಮ್ಮಿಬ್ಬರ ಸಂಭಾಷಣೆಯನ್ನು ನಿಲ್ಲಿಸಿ, ನಮ್ಮ ಸನ್ನಿವೇಶಗಳನ್ನು ನಮಗೆ ನೆನಪುಮಾಡಿ ಕೊಟ್ಟಿತು. ಗ್ರಾಮಾಫೋನು “ರಾಧೇಕೃಷ್ಣ ಬೋಲೊ........” ಎಂಬ ಹಾಡನ್ನು ಹಾಡುತ್ತಿತ್ತು. ಅದು ಮುಗಿದೊಡನೆ ನಮ್ಮ ಪಕ್ಕದಲ್ಲಿದ್ದಾತ ಎಲ್ಲರಿಗಿಂತ ಹೆಚ್ಚಾಗಿ ಕೈತಟ್ಟಿ ತನ್ನ ಪ್ರಶಂಸೆಯನ್ನು ಸಲ್ಲಿಸಿದ. ಆತ ಸೂಟು ಧರಿಸಿ, ಫೆಲ್ಟ್‌ಹ್ಯಾಟನ್ನು ಕೈಯಲ್ಲಿ ಹಿಡಿದುಕೊಂಡು ಬಂದು ‘ಓವಲ್ಟೀನ್ ಕೊಡು’ ಎಂದು ಮಾಣಿಗೆ ಹೇಳಿದುದರಿಂದ, ಆತ ಯಾವ ಕಡೆಯವನೆಂಬುದು ನನಗೆ ಗೊತ್ತಾಗಲಿಲ್ಲ. ಊಹಿಸು

ವುದೂ ಕಷ್ಟವೇ ಆಯಿತು. ಹೊಸ ಪರಿಚಯಸ್ಥರಾದ ಕನ್ನಡಪುತ್ರರ ಸತ್ವ ವನ್ನು ಒರೆಹಚ್ಚುವ ಸಮಯ ಬಂತೆಂದು ನಾನು ಹೊಸತಾಗಿ ಬಂದು ಕುಳಿತಿದ್ದವರನ್ನು "ನೀವು ಯಾವ ಕಡೆ" ಎಂದು ಕೇಳುತ್ತಿರುವಷ್ಟರಲ್ಲಿಯೇ, ಕನ್ನಡ ಪುತ್ರರು ತಮ್ಮ ಮುಷ್ಟಿಯಿಂದ ಮೇಜಿನ ಮೇಲೆ ಬಲವಾಗಿ ಗುದ್ದಿ, ಕೆಂಪನೆ ಕಣ್ಣುಗಳಲ್ಲಿ ಕೋಪವನ್ನು ಕಿಡಿ ಸುರಿಸುತ್ತಾ ನನ್ನ ಪ್ರಶ್ನೆಯನ್ನು ಅಲ್ಲಿಗೇ ನಿಲ್ಲುವಂತೆ ಮಾಡಿ, ನಾನು ಹೂಡಿದ್ದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಅವರ ಮುಷ್ಟಿಪ್ರಹಾರಕ್ಕೆ ಮೇಜಿನ ಮೇಲಿದ್ದ ಲೋಟಾಗಳು ಝಣ್ ಎಂದು ನಡುಗಿದವು. ಕನ್ನಡಪುತ್ರರು ನರಸಿಂಹಾವತಾರ ಪುನರಪಿ ಆಯ್ತೆಂಬಂತೆ ಆರ್ಭಟಿಸುತ್ತ "ಕ್ಷಮಿಸಿ, ನನ್ನ ಸಮಕ್ಷಮದಲ್ಲಿ ಈ ತರದ ನೀಚಪ್ರಶ್ನೆಯನ್ನು ಉಚ್ಚರಿಸುವುದಕ್ಕೂ ನಾನು ಬಿಡುವುದಿಲ್ಲ. ಯಾವ ಕಡೆಯಿಂದ ಬಂದರೇನು? ಅವರ ವಿಳಾಸದ ಮೇಲೆ ಅವರ ಯೋಗ್ಯತೆಯನ್ನು ಕಂಡುಹಿಡಿಯುತ್ತೀರೇನು? ಇದು ನ್ಯಾಯವೆ? ಸರಿಯೆ? ಇಲ್ಲಿ ಕೇಳಿ. ಹತ್ತಿಯ ಮುಖಕಾಣದ ದಾವಣಗೆರೆಯವರನ್ನು ಬಲ್ಲೆ. ಛತ್ರದ ಮರ ಹದಿನೆಂಟು ಅಡಿ ಎಂದು ಹೇಳಿದ ಕಾವೇರಿ ತೀರದವರನ್ನು ಬಲ್ಲೆ. 'ಜಯಂತಿ'ಯೆಂಬುದು ಸಾಂಗ್ಲಿ ಮಹಾರಾಣಿಯ ಗಿಳಿಯ ಹೆಸರೆಂದು ಹೇಳಿದ ತರುಣ ಧಾರವಾಡದವರನ್ನೂ ಬಲ್ಲೆ. ಸಮುದ್ರವನ್ನು ಕಾಣದ ಮಂಗಳೂರಿನವರನ್ನೂ ಬಲ್ಲೆ. ಊರು, ಪ್ರದೇಶ, ಪ್ರಾಂತದ ಮೇಲೆ ಮನುಷ್ಯನ ಗುಣವನ್ನು ಕಂಡುಹಿಡಿಯುತ್ತೀರಾ? ಸಾಧ್ಯವಿಲ್ಲ. ಕನ್ನಡಿಗನು ಕನ್ನಡಿಗನಾಗಿಯೆ ಇರಲಿ. ಆ ಕಡೆ ಈ ಕಡೆ ಯವನಾಗಿರುವುದು ಬೇಡ. ಇಂಥ ಕಡೆಯವನೆಂದು ಮೊದಲನೆ ಮುಖ ಮುದ್ರೆ ಮೆತ್ತುವ ಮಾತನ್ನು ಮುಂದಕ್ಕೆ ಮರೆಯಿರಿ" ಎಂದರು.

ನಾನು ನಮ್ರನಾಗಿ "ದಯವಿಟ್ಟು ಕ್ಷಮಿಸಿ ಸ್ವಾಮಿ, ತಮಗೆ ಇಷ್ಟು ಕೋಪ ಬರುತ್ತದೆ ಎಂದು ತಿಳಿದಿದ್ದರೆ ನಾನು ಆ ಪ್ರಶ್ನೆಯ ಗೊಡವೆಗೇ ಹೋಗುತ್ತಿರಲಿಲ್ಲ. ಕರ್ನಾಟಕದ ಐಕ್ಯತೆಯಲ್ಲಿ, ಪೂರ್ಣತೆಯಲ್ಲಿ, ತಮಗೆ ಇಷ್ಟು ಪ್ರೇಮ ಶ್ರದ್ಧೆಗಳಿವೆಯೆಂಬುದು ನನಗೆ ತಿಳಿದೂ ಇರಲಿಲ್ಲ. ಅದರ ಒಳವಿಭಾಗದ ಅಂತಃಕಲಹಕ್ಕೆ ಕಾಲಪುರುಷರಾಗಿ ತಾವು ಕಂಕಣ ಕಟ್ಟಿರುವು ದನ್ನೂ ಕಾಣಲಿಲ್ಲ. ನನ್ನ ಉದ್ದೇಶ ಬೇರೆ ಇತ್ತು. ಸಾಧಾರಣವಾಗಿ 'ರಾಧೇ ಕೃಷ್ಣ ಬೋಲೋ' ಹಾಡು ಮೆಚ್ಚುವವರು ಮಿರಜಿ ಸಾಂಗ್ಲಿ ಕಡೆಯವರಿರ

ಬಹುದೆಂದು ಊಹಿಸಿ, ನನ್ನ ತರ್ಕವು ಸರಿಯೋ ತಪ್ಪೋ ತಿಳಿಯೋಣವೆಂದು ಆ ರೀತಿ ಕೇಳಿದೆ; ಅಷ್ಟೇ; ಕರ್ನಾಟಕವನ್ನು ಹೋಳುಮಾಡುವುದಕ್ಕಲ್ಲ" ಎಂದು ಕ್ಷಮೆ ಬೇಡಿದೆ.

"ಹಾಡು ಚೆನ್ನಾಗಿತ್ತು ; ಸಂಗೀತವನ್ನು ಮೆಚ್ಚಿದೆ" ಎಂದು ಸೂಟಿನವರು ಹೇಳಿ, ಅನುಮಾನವನ್ನು ಸಂದಿಗ್ಧತೆಯಲ್ಲಿಯೆ ಇರಿಸಿದರು.

ಆ ಜವಾಬು ಕನ್ನಡಪುತ್ರರಿಗೆ ಹೆಚ್ಚು ಹುರುಪು ಕೊಟ್ಟಂತೆ ತೋರುತ್ತದೆ. ಅವರು ನನಗೆ, "ನಿಮ್ಮದು ತಪ್ಪು ಅಭಿಪ್ರಾಯ, ಚೌಡಯ್ಯನವರನ್ನು ಹೊಗಳುವ ಸಾಂಗ್ಲಿಯವರಿದಾರೆ. ಬೇಂದ್ರೆಯವರನ್ನು ಮೆಚ್ಚಿದ ಮಂಗಳೂರಿನವರಿದಾರೆ. ಕಾರಂತರನ್ನು ಒಪ್ಪಿದ ಮೈಸೂರಿನವರಿದಾರೆ. ದಸರೆಗೆ ಹೋಗುವ ಸಹಸ್ರಾರು ಜನ ಉತ್ತರ ಕನ್ನಡಿಗರಿದಾರೆ. ನಿಮ್ಮದೆಲ್ಲಾ ಅವಿವೇಕ. ಕರ್ನಾಟಕ ಬಹಳ ಸಣ್ಣದರೀ. ಒಳವಿಭಾಗಕ್ಕೆ ಜಾಗವೇ ಇಲ್ಲ. ದ್ರಾಕ್ಷೆಯನ್ನು ಕೊಯ್ದು ತಿನ್ನುತ್ತಾರೆಯೆ? ನೋಡಿ; ನಾನು ಬೆಂಗಳೂರು, ಧಾರವಾಡ, ಮಂಗಳೂರು ಈ ಮೂರೂ ಕಡೆ ಮನೆ ಮಾಡಿದೇನೆ. ನಮ್ಮ ನಾಡಿನ ಅಂತಃಕಲಹ ತಪ್ಪಿದ ದಿನವೇ ಕರ್ನಾಟಕ ಚೆಲುವಾಗುತ್ತದೆ. ಅಲ್ಲಿಯವರೆಗೂ ಕರ್ನಾಟಕ ಸಿಡುಬೆದ್ದ ಸುಂದರಿ" ಎಂದರು.

ನಿಮ್ಮಂಥ ಶ್ರದ್ಧಾವಂತರಾದ ಏಕೀಕರಣಭಕ್ತರನ್ನು ನಾನು ಇದುವರೆಗೂ ನೋಡಿರಲಿಲ್ಲ. ಆದರೆ ಆ ಶ್ರದ್ಧೆ ಮಿತಿಮೀರಿದರೆ ಸ್ವಭಾವವಾಗಿ ಇರಬೇಕಾದ ಊರಿನ, ಪ್ರದೇಶದ, ಮಮತೆ ಮಣ್ಣಾಗುವುದಿಲ್ಲವೆ?'' ಎಂದು ಕೇಳಿದೆ.

"ನನ್ನ ಪ್ರಶ್ನೆಗೆ ತಾತ್ಸಾರವೇ ಮದ್ದೆಂಬಂತೆ ಅವರು ನಿರ್ಲಕ್ಷ್ಯದಿಂದ "ಅಂಥ ಸ್ವಭಾವವುಳ್ಳ ಪ್ರಾಣಿಗೆ ನಾಯಿ ಎಂದು ಹೆಸರು. ಒಂದೇ ಮನೆಗೆ, ಒಬ್ಬ ಯಜಮಾನನಿಗೆ ಸೇರಿದವಾದರೂ ಅವು, ತಾವು ಕೂಡುವ ಸ್ಥಳಕ್ಕಾಗಿ ಕಚ್ಚಾಡುತ್ತವೆ. ಧಾರವಾಡದವರು, ಮೈಸೂರಿನವರು, ಮಂಗಳೂರಿನವರು, ಮದ್ರಾಸಿನ ಕಡೆಯವರು ಎಲ್ಲರೂ ಒಂದೇ ಕನ್ನಡತಾಯಿಯ ಮಕ್ಕಳು. ಒಂದಲ್ಲ ಒಂದು ದಿನ ಈ ತರದ ವಿಭಾಗಗಳು ಮಾಯವಾಗುತ್ತವೆ" ಎಂದರು.

"ಆದರೂ ನಿಮಗೆ ನಿಮ್ಮ ಊರಿನ, ನಿಮ್ಮ ಕಡೆಯ ಸವಿನೆನಪು, ಹೆಮ್ಮೆ ಆಗುವುದೇ ಇಲ್ಲವೆ? ಎಂದಾದರೂ ಒಮ್ಮೆ ಕೂಡ ಆಗುವುದಿಲ್ಲವೆ?"

ಎಂದು ಕೇಳಿದೆ.

'ಎಲ್ಲಿ ನನ್ನ ಊರು? ನನ್ನ ಊರೇ ಇಲ್ಲ ನನ್ನದು ಕನ್ನಡ ನಾಡು. ನಾನು ಮುಗಿಲಾಕಾರದ ಅಖಿಲ ಕರ್ನಾಟಕೀ. ತಮ್ಮ ಊರಿನ, ಪ್ರಾಂತದ, ವಿಭಾಗದ ಪ್ರತಿಷ್ಠೆಗಳನ್ನೇ ಕೊಚ್ಚಿಕೊಂಡು ಭುಜತಟ್ಟುವ ಕನ್ನಡಿಗರನ್ನು ನೋಡಿದೇನೆ. ಕೇಳಿರಿ – 'ಬೃಂದಾವನ'ದಲ್ಲಿ ಕುಳಿತು ತಮ್ಮ ಊರಿನ ಮುನಿಸಿ ಪಾಲಿಟಿ ಬೀಳುತೋಟ ಹೆಚ್ಚು ಅಂದವಾದ್ದೆಂದು ಹರಟಿದ ಉತ್ತರದವರನ್ನು ಬಲ್ಲೆ. ಇದು 'ಮರಾಠಿ-ಗನ್ನಡ ಅಲ್ವೇ ?' ಎಂದು ಉತ್ತರದವರನ್ನು 'ಕನ್ನ ಡಾಂಗ್ಲೋ' ಭಾಷೆಯಲ್ಲಿ ಹೀಯಾಳಿಸಿದ ದಕ್ಷಿಣದವರನ್ನೂ ಬಲ್ಲೆ. 'ಮಂಗ ಳೂರು ಸಮುದ್ರದ ನೀರು ಎಷ್ಟೋ ಸಿಹಿ' ಎಂದು ಹೇಳಿ ಕಾವೇರಿಯ ನೀರನ್ನು ಹಂಗಿಸಿದ ಮಂಗಳೂರಿನವರನ್ನೂ ಬಲ್ಲೆ. '........' ದಂಥ ಪ್ರಸಿದ್ಧ ಪತ್ರಿಕೆಯ ಸಮಾನವೇ ಆ 'ಪ್ರಬುದ್ಧ ಕರ್ನಾಟಕ' ಎಂದು ದಿಟ್ಟತನದಿಂದ ನುಡಿದ ಧಾರವಾಡದವರನ್ನೂ ಬಲ್ಲೆ. ಇವೆರೆಲ್ಲರನ್ನೂ ಹುಚ್ಚರೆಂದೇ ಹೇಳ ಬೇಕು' ಎಂದರು.

ಇಷ್ಟು ಮಾತನಾಡುವ ಹೊತ್ತಿಗೆ ಆ ಮಂದಿರದ ಇನ್ನೊಂದು ಮೂಲೆ ಯಲ್ಲಿದ್ದವರೊಬ್ಬರು ಕನ್ನಡಪುತ್ರರನ್ನು ಗುರುತುಹಿಡಿದು ಕೈತಟ್ಟಿ ಕರೆದರು. ಕನ್ನಡಪುತ್ರರು ನನಗೆ ದೀರ್ಘಪ್ರಣಾಮಮಾಡಿ –ಎಷ್ಟು ವಿನಯ ! –ಆ ಕಡೆಗೆ ಹೊರಟರು.

ಅವರು ಆ ಕಡೆ ಹೊರಟುಹೋದ ಮೇಲೆ ಮಾಣಿಗೆ ಪುನಃ ಕಾಫಿ ತರಲು ಹೇಳಿ, ಯೋಚನಾತರಂಗಗಳಲ್ಲಿ ತೇಲಿಕೊಂಡು ಹೋದೆ .... ನನಗೆ ಎಂಥವರ ದರ್ಶನವಾಯ್ತು ! ಅವರು ಅದೆಂತಹ ದೇಶಭಕ್ತರು !! ಇದು ವರೆಗೂ ನಾನು ಕಂಡದ್ದು ವೇಷಧಾರಿಗಳನ್ನೇ. ಆದರೆ ಕನ್ನಡಪುತ್ರರು ಅಂಥವರಲ್ಲ. ಅವರ ಮಾತು, ಅವರು ಉಟ್ಟಿದ್ದ ಏಕೀಕರಣದ ಬಟ್ಟೆ, ಅದಕೆ ನಿದರ್ಶನ. ಅವರು ಶ್ರದ್ಧಾಳುಗಳು........'

ಎದುರು ಮೂಲೆಯಿಂದ ಉದ್ಭವಿಸಿ ಬಂದ ಗಲಾಟೆ ನನ್ನ ಯೋಚನಾ ತರಂಗಗಳನ್ನು ಕತ್ತರಿಸಿತು. ಆ ಕಡೆಗೆ ನೋಡುತ್ತೇನೆ; ಕನ್ನಡಪುತ್ರರೂ

ಅವರನ್ನು ಆ ಕಡೆಗೆ ಕರೆದ ಅವರ ಮಿತ್ರರೂ ಕುಸ್ತಿಯಾಡುತ್ತಿದ್ದಾರೆ. ಜನರೆಲ್ಲರೂ ಅವರ ಕಡೆ ನುಗ್ಗುತ್ತಿದ್ದಾರೆ. ಕುರ್ಚಿಗಳು ಮೇಜುಗಳು ಉರುಳುತ್ತಿವೆ. ಲೋಟಾಗಳು ದಿಕ್ಕಾಪಾಲಾಗುತ್ತಿವೆ. ಗಾಜಿನ ಸಾಮಾನು ಒಡೆಯುತ್ತಿವೆ. ನನಗೆ ಕಾಫಿ ತಂದುಕೊಟ್ಟ ಮಾಣಿಯನ್ನು ಗಲಭೆಗೆ ಕಾರಣವೇನೆಂದು ವಿಚಾರಿಸಿದೆ. "ಇಲ್ಲಿ ನಿಮ್ಮ ಹತ್ತಿರ ಮಾತನಾಡುತ್ತಾ ಕುಳಿತಿದ್ದರಲ್ಲ, ಅವರು ಅಲ್ಲಿಗೆ ಹೋಗಿ ಕುಳಿತುಕೊಂಡರು. ಇಲ್ಲಿಂದ ಅವರನ್ನು ಕೈಕಟ್ಟಿ ಕರೆದವರು ಅವರ ಹತ್ತಿರದ ಊರಿನವರು, ಇಲ್ಲಿದ್ದವರ ಊರಿನ ಮುನಿಸಿಪಾಲಿಟಿಯ ಆಡಳಿತವನ್ನು ಹೀನಾಮಾನಾ ಬೈದರು. ಇವರೂ ಒಬ್ಬ ಕೌನ್ಸಿಲರಂತೆ. ಇವರಿಗೆ— ನಿಮ್ಮ ಜತೆಯಲ್ಲಿ ಕುಳಿತಿದ್ದವರಿಗೆ— ಸಿಟ್ಟು ಬಂದು 'ನಮ್ಮ ಊರಿನ ಮುನಿಸಿಪಾಲಿಟಿಯನ್ನು ಬಯ್ಯುತ್ತೀಯಾ' ಎಂದು ಅವರ ಕೆನ್ನೆಗೆ ಹೊಡೆದರು" ಎಂದ ಮಾಣಿ.

——::——

'A Cosmopolite in a Cafe' ಎಂಬುದರ ಅನುಸರಣೆ.

# ಗಡಿಯಾರ

'ಚಾಮರಾಜಪೇಟೆ ಎರಡನೇ ಕ್ರಾಸ್' ಎಂದು ಬಸ್ಸಿನ ಕಂಡಕ್ಟರು ಕಿರಚಿದ. ಬಸ್ಸಿನಿಂದ ಎಂಟು ಹತ್ತು ನರಕುರಿ ಇಳಿದವು; ನಾಲ್ಕೈದು ಬಸ್ಸಿನೊಳಗೆ ಹತ್ತಿದವು. ಕಂಡಕ್ಟರು ಗಂಟೆ ಹೊಡೆದ. 'ಜರ್' ಎಂದು ಸದ್ದು ಮಾಡುತ್ತ ಬಸ್ಸು ಮುಂದೆ ಹೊರಟುಹೋಯಿತು.

ಬಸ್ಸಿನಿಂದ ಇಳಿದವರ ಪೈಕಿ ಒಬ್ಬ ನರಸಯ್ಯ. ಎಡಗಡೆ ದಾರಿ ಹಿಡಿದು ತಲೆ ತಗ್ಗಿಸಿಕೊಂಡು ನರಸಯ್ಯ ನಿಧಾನವಾಗಿ ಮನೆಕಡೆ ಹೊರಟ. ಹೌದು. ನಿಧಾನವಾಗಿಯೇ ಹೋದ. ಆತುರದಿಂದ ಹೋಗಬೇಕಾದ ಅವಶ್ಯಕತೆ ಯೇನೂ ಇರಲಿಲ್ಲ. ಅವನ ಜೀವನದಲ್ಲಿ ಹೊಸ ವಿದ್ಯಮಾನ ಯಾವುದೂ ಎಂದೂ ಮೂಡುತ್ತಲೇ ಇರಲಿಲ್ಲ. ಹೊಸದನ್ನು ನೋಡುವ ಉತ್ಸುಕತೆಗೆ ಕಾರಣವೇ ಇರಲಿಲ್ಲ. ಇದ್ದಕ್ಕಿದ್ದ ಹಾಗೆ ಏನಾದರೂ ಹೊಸ ಸಂಘಟನೆ ಘಟಿಸಬಹುದೆಂದು ಅವಸರದಿಂದ ಹೋಗಬೇಕಾದ್ದಿರಲಿಲ್ಲ. ಅವನ ಜೀವನದ ಪ್ರತಿ ಕ್ಷಣದಲ್ಲಿಯೂ ಹೀಗೆ ಹೀಗೇ ನಡೆಯಬೇಕೆಂದು ಸರ್ವವೂ ಕ್ಲುಪ್ತ ವಾಗಿತ್ತು. ಪ್ರತಿಯೊಂದೂ ಗಡಿಯಾರದಂತೆ, ಒಂದು ಕ್ಷಣವೂ ಹೆಚ್ಚು ಕಡಿಮೆಯಾಗದಂತೆ ನಡೆಯುತ್ತಿತ್ತು. ಆ ರಾತ್ರಿಯೆಲ್ಲಾ, ಆ ರಾತ್ರಿ ಏಕೆ? ಪ್ರತಿ ದಿನವೂ ಬೆಳಗ್ಗೆ, ಮಧ್ಯಾಹ್ನ, ಸಂಜೆ, ರಾತ್ರಿ ಪ್ರತಿ ಕ್ಷಣದಲ್ಲಿ ಏನೇನು ನಡೆಯುತ್ತದೆ ಎನ್ನುವುದು ಬದಲಾಯಿಸದೆ, ಹಾಗೆಯೇ ನಡದುಕೊಂಡು ಬಂದಿದ್ದ ಎರಡು ವರ್ಷಗಳ ಅನುಭವದಿಂದ, ನರಸಯ್ಯನಿಗೆ ಚೆನ್ನಾಗಿ ಗೊತ್ತಿತ್ತು.

ಅವನು ಬಸ್ಸಿನಿಂದ ಇಳಿದಾಗ ಏಳೂವರೆ ಗಂಟೆ. ಮನೆಗೆ ಹೋಗುವ ಹೊತ್ತಿಗೆ ಏಳೂ ಮುಕ್ಕಾಲು. ಮನೆ ಬಾಗಿಲು ಹಾಕಿರುತ್ತದೆ. ಅವನ ಹೆಂಡತಿ ಲಕ್ಷ್ಮಿ ಅಡಿಗೆ ಮಾಡಿಟ್ಟು, ದೇವರ ಮನೆಯಲ್ಲಿ "ಗಂಗೇ, ನಾನಭಿವಂದಿಪೇ" ಎಂದು ಹಾಡುತ್ತಾ ಇರುತ್ತಾಳೆ, ಗ್ರಾಮಫೋನು ಪ್ಲೇಟಿನಲ್ಲಿರುವಂತೆಯೆ. ನರಸಯ್ಯ ಪದ್ಧತಿಯಂತೆ ಎರಡು ಸಲ ಬಾಗಿಲು ತಟ್ಟಿ "ಬಾಗಿಲೂ" ಅಂತ ಒಂದು ಸಲ ಕೂಗುತ್ತಾನೆ. ಒಳಗಿನಿಂದ ಲಕ್ಷ್ಮಿ "ಯಾರೂ" ಎನ್ನುತ್ತಾಳೆ. ನರಸಯ್ಯ "ನಾನೂ" ಎಂದು ಉತ್ತರ ಕೊಡುತ್ತಾನೆ. ಲಕ್ಷ್ಮಿಗೆ ಗಂಡನ ಧ್ವನಿ ಗುರುತು ಸಿಕ್ಕಿದರೂ ತನ್ನಧೈರ್ಯಕ್ಕೆ ಮತ್ತೊಮ್ಮೆ "ಯಾರು" ಎಂತ ಕೇಳುತ್ತಾಳೆ. "ನಾನೇ, ನಾನು!" ಎಂದು ನರಸಯ್ಯ ಮಾಮೂಲಿನಂತೆ ಹುಬ್ಬು ಗಂಟಿಕ್ಕಿ ಹೇಳುತ್ತಾನೆ. ಲಕ್ಷ್ಮಿ ಆಗ ಎದ್ದು ಬಂದು ಕಿಟಿಕಿ ಬಾಗಿಲು ತೆರೆದು ಇಣಿಕಿ ನೋಡಿ, "ನೀವೇ! ಎಂದು ಬಾಗಿಲು ತೆರೆಯುತ್ತಾಳೆ. "ಮತ್ತಿನ್ನಾರು?" ಎನ್ನುತ್ತಾ ಒಳಗೆ ಬಂದು ನರಸಯ್ಯ ಅಂಗಿ ಬಿಚ್ಚಿ, ಷರಟು ತೆಗೆದು, ಬಚ್ಚಲ ಮನೆಗೆ ಹೋಗುತ್ತಾನೆ. ಅವನು ಕಾಲು ತೊಳೆದು ಬರುವ ಹೊತ್ತಿಗೆ ಲಕ್ಷ್ಮಿ ಅವನಿಗೆ ಎಲೆಹಾಕಿ, ಕಾಲು ಒರಸಿಕೊಳ್ಳುವುದಕ್ಕೆ ಟವಲು ಕೊಡುತ್ತಾಳೆ. ಅಷ್ಟು ಹೊತ್ತಿಗೆ ಅವರ ಮನೆ ಗಡಿಯಾರದಲ್ಲಿ ಎಂಟು ಗಂಟೆ ಹೊಡೆಯುತ್ತದೆ. ನರಸಯ್ಯ ಊಟ ಪ್ರಾರಂಭಿಸುವ ಹೊತ್ತಿಗೆ ಸರಿಯಾಗಿ ಪಕ್ಕದ ಮನೆ ಹುಡುಗಿ ಎಂದಿನಂತೆ ಹಾರ್ಮೋನಿಯಂ ಕಲಿಯಲು ಮೊದಲು ಮಾಡುತ್ತಾಳೆ. ಶಬ್ದವನ್ನು ಆದಷ್ಟು ಕಡಿಮೆ ಮಾಡಬೇಕೆಂದು ಲಕ್ಷ್ಮಿ ಎಲ್ಲಾ ಬಾಗಿಲುಗಳನ್ನೂ ಹಾಕುತ್ತಾಳೆ. ನರಸಯ್ಯ ಮಜ್ಜಿಗೆ ಅನ್ನವನ್ನು ಕಲಸುವ ಹೊತ್ತಿಗೆ ಸರಿಯಾಗಿ ಹಾಲಿನವಳು "ಹಾಲೂ" ಎಂದು ಹೊರಗೆ ಗಂಟಲು ಹರಿದುಕೊಳ್ಳುತ್ತಾಳೆ. ಲಕ್ಷ್ಮಿ ಹಾಲನ್ನು ಅಳೆಸಿಕೊಂಡು ಬಂದು ಅದನ್ನು ತೆಗೆದಿಡುವವರೆಗೆ ನರಸಯ್ಯ, ಎಲೆಯಲ್ಲಿ ಉಪ್ಪಿಲ್ಲದ್ದರಿಂದ ಅವಳ ದಾರಿ ಕಾಯುತ್ತಾ ಕುಳಿತಿರುತ್ತಾನೆ. ಲಕ್ಷ್ಮಿ ಉಪ್ಪು ಬಡಿಸುವ ಸಮಯಕ್ಕೆ ಸರಿಯಾಗಿ ಹತ್ತಿರದಲ್ಲೇ ಇರುವ ಅಕ್ಕಿ ಬೀಸುವ ಯಂತ್ರ ಕೂಗುತ್ತದೆ. ನರಸಯ್ಯ ಊಟಮಾಡಿ ಕೈ ತೊಳೆದುಕೊಳ್ಳುವ ಹೊತ್ತಿಗೆ ಎಂಟೂಕಾಲು ಗಂಟೆ. ಆಮೇಲೆ ಕಛೇರಿಯಿಂದ ತಂದ ಹಿಂದಿನ ದಿನದ ವರ್ತಮಾನ ಪತ್ರಿಕೆಗಳನ್ನು ಓದುತ್ತಾ ಕುಳಿತುಬಿಡುತ್ತಾನೆ. ಗಡಿ

ಯಾರದಲ್ಲಿ ಒಂಭತ್ತು ಗಂಟೆ ಹೊಡೆಯುತ್ತಲೂ ಮೆಲ್ಲನೆ ಏಳುತ್ತಾನೆ. ಶಾಲು ಹೊದೆದುಕೊಳ್ಳುತ್ತಾನೆ. ನಶ್ಯದ ಡಬ್ಬಿಯನ್ನು ಜೇಬಿನೊಳಕ್ಕೆ ಹಾಕಿ ಕೊಳ್ಳುತ್ತಾನೆ. ಕೋಲನ್ನು ಕೈಲಿ ತೆಗೆದುಕೊಳ್ಳುತ್ತಾನೆ. ಇವೆಲ್ಲವನ್ನೂ ಗಮನಿಸುತ್ತಿರುವ ಲಕ್ಷ್ಮಿ ಮುಖವನ್ನು ಸಿಂಡರಿಸಿಕೊಂಡು "ಎಲ್ಲಿಗೆ ಹೋಗು ತ್ತೀರೀ" ಎನ್ನುತ್ತಾಳೆ.

"ಆಂ-ಎ-ಎಲ್ಲು-ಎಲ್ಲೂ ಇಲ್ಲ. ಇಲ್ಲೇ ಸುಬ್ಬಯ್ಯನವರ ಮನೆಗೆ ಹೋಗಿ, ನೀನು ಕೆಲಸ ಮಾಡುವಷ್ಟರಲ್ಲಿ ಎರಡಾಟ ಇಸ್ಪೀಟು ಆಡಿಕೊಂಡು ಬರುತ್ತೇನೆ."

ಇದಕ್ಕೆಲ್ಲಾ ಮನ್ಮಥ ಹೊಣೆ! ಮುಂದೆ ತನ್ನ ಅಪ್ಪನಿಗೆ ಉತ್ತರ ಕೊಡಬೇಕಾದೀತು ತನ್ನ ಕೆಲಸ ಸರಿಯಾಗಿ ಮಾಡದೇ ಇದ್ದದ್ದಕ್ಕೆ! ಮದುವೆ ಯಾಗಿ ಗಂಡ ಹೆಂಡಿರು ಸಂಸಾರ ಹೂಡಿದರೋ ಇಲ್ಲವೋ, ಇನ್ನು ನನಗೇನುಕೆಲಸ ಇಲ್ಲಿ, ಅಂತ ತಪ್ಪು ತಿಳಿದುಕೊಂಡು ಹೊರಟುಹೋಗುತ್ತಾನೆ.

ಇಸ್ಪೀಟಾಟ ಮುಗಿಸಿಕೊಂಡು ನರಸಪ್ಪ ಮನೆಗೆ ಹಿಂದಿರುಗುವ ಹೊತ್ತಿಗೆ ಹನ್ನೊಂದು ಹನ್ನೆರಡು ಗಂಟೆ. ಲಕ್ಷ್ಮಿ ಒಂದೊಂದು ಸಲ ಕಾದು ಕುಳಿತಿರುತ್ತಾಳೆ; ಒಂದೊಂದು ಸಲ ದೀಪ ಸಣ್ಣಗೆಮಾಡಿ ನಿದ್ದೆ ಮಾಡು ತ್ತಿರುತ್ತಾಳೆ.

ಆದಿವಸ ನರಸಯ್ಯ ಮನೆಗೆ ಬಂದಾಗ ಎಲ್ಲಾ ಬದಲಾಯಿಸಿಹೋಗಿತ್ತು. ಮನೆಯ ಬಾಗಿಲು ಹಾಕಿರಲಿಲ್ಲ, ತೆರೆದಿತ್ತು. ಲಕ್ಷ್ಮಿ ಎಲ್ಲೂ ಕಾಣಲಿಲ್ಲ. ಹಾರ್ಮೋನಿಯಂ ಬಾರಿಸುವ ಪಕ್ಕದ ಮನೆ ಹುಡುಗಿ, ನರಸಯ್ಯನಿಗೋಸ್ಕರ ಕಾದಿದ್ದವಳು, ಅವನು ಬಂದೊಡನೆ ಅವನ ಕೈಗೆ ಒಂದು ಚೀಟಿಕೊಟ್ಟು ಮನೆಗೆ ಹೊರಟುಹೋದಳು. ಲಕ್ಷ್ಮಿ ಮನೆಯಲ್ಲೇ ಇರಲಿಲ್ಲ. ನರಸಯ್ಯನ ಹಾಸಿಗೆಯೆಲ್ಲಾ ಚಲ್ಲಾಪಿಲ್ಲಿಯಾಗಿತ್ತು. ಅವನ ಶಾಲು, ಮಗ್ಗಲು ಹಾಸಿಗೆ, ದಿಂಬು, ಒಂದೂ ಇರಲಿಲ್ಲ. ಹಾಸಿಗೆಯನ್ನು ಪುನಃ ಸುತ್ತಿರಲಿಲ್ಲ. ಲಕ್ಷ್ಮಿಯ ಟ್ರಂಕು ತೆರೆದಿತ್ತು. ಅದರಲ್ಲಿನ ಸಾಮಾನುಗಳೂ ಚಲ್ಲಾಪಿಲ್ಲಿಯಾಗಿದ್ದವು. ಕನ್ನಡಿಯ ಪಕ್ಕದಲ್ಲಿ ಬಿದ್ದಿದ್ದ ಕೊಂಬಿನ ಬಾಚಣಿಗೆಯ ಹಲ್ಲುಗಳಲ್ಲಿ ಲಕ್ಷ್ಮಿಯ ನೀಳವಾದ ಗುಂಗುರುಗೂದಲು, ಸೆರೆಹಿಡಿದು ನಿಲ್ಲಿಸಿದ ಕರೀ ಹೊಗೆಯ

ಸುರುಳಿಗಳಂತೆ ನಿಂತಿದ್ದವು. ಲಕ್ಷ್ಮಿ ಬಹಳ ಅವಸರದಲ್ಲಿ ಹೊರಟು ಹೋಗಿರಬೇಕು. ತಲೆ ಬಾಚಿಕೊಂಡ ಮೇಲೆ ಬಾಚಣಿಗೆಯ ಹಲ್ಲಿನ ನಡುವೆ ಸಿಕ್ಕಿಕೊಂಡ ಕೂದಲನ್ನು ತೆಗೆಯದೆ ಲಕ್ಷ್ಮಿ ಮತ್ತಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಅಷ್ಟು ಶುಚಿ ಅವಳು! ನರಸಯ್ಯನಿಗೆ ಬಾಯಿ, ಗಂಟಲು ಒಣಗಿಕೊಂಡು ಬಂತು. ಆಗ ತನ್ನ ಕೈಲಿದ್ದ ಚೀಟಿಯ ನೆನಪಾಗಿ, ಅದನ್ನು ತೆಗೆದು ಓದಿದ.

"ನಮಸ್ಕಾರಗಳು. ಸಾಯಂಕಾಲ ೫-೩೦ ಗಂಟೆಗೆ ಲಚ್ಚಿ ಬಂದು ಅಕ್ಕನಿಗೆ ಹೊಟ್ಟೆನೋವು ಶುರುವಾದ್ದರಿಂದ ಹೆರಿಗೆ ಆಸ್ಪತ್ರೆಗೆ ಭಾವ ಸೇರಿಸಿದಾರೆ, ಅಮ್ಮ ಊರಲಿಲ್ಲ, ನೋಡಿಕೊಳ್ಳುವವರು ಯಾರೂ ಇಲ್ಲ ಅಂದ. ಅದಕ್ಕೇ ನಾನು ಕೂಡಲೇ ಹೋಗಿದೇನೆ. ಬೇಳೆ ಎಸರಿಗೆ ಇಟ್ಟಿದೆ. ಅಕ್ಕನನ್ನು ಆಸ್ಪತ್ರೆಯಿಂದ ಬಿಡಿಸುವವರೆಗೂ ನಾನು ಆಸ್ಪತ್ರೆಯಲ್ಲಿ ಇರಬೇಕು. ಸಾರಿಗೆ ಮೆಣಸಿನಪುಡಿ ಒಂದೇ ಚಮಚ ಸಾಕು. ಅವಳಿಗೆ ಮೊದಲೇ ಬಹಳ ದಿಗಿಲು. ಇವತ್ತು ರಾತ್ರಿಯಿಂದ ಅರಪಾವೇ ಹಾಲು ಸಾಕು. ಜಾಗ್ರತೆ ಬಂದುಬಿಡುತ್ತೇನೆ. ಮೊಸರೂ ಅರಪಾವು ಸಾಕು. ನನಗೆ ಊಟ ಅಕ್ಕನ ಮನೆಯಿಂದ ಕಳಿಸುತ್ತಾರೆ. ವರ್ತನೆ ಹಾಕಿದ್ದು ಗೋಡೆಯ ಮೇಲೆ ಮರೆಯದೆ ಗುರುತು ಹಚ್ಚಿಸಿ. ಎಲ್ಲಾ ಸಮಾಚಾರ ನಾಳೆ ಹೇಳಿಕಳುಹಿಸುತ್ತೇನೆ. ನಮಸ್ಕಾರಗಳು. —ಲಕ್ಷ್ಮಿ."

ಲಕ್ಷ್ಮಿ, ನರಸಯ್ಯ ಸಂಸಾರಹೂಡಿ ಎರಡು ವರ್ಷಗಳಾಗಿದ್ದರೂ, ಅವರಿಗೆ ಒದಗಿದ ಸಂದರ್ಭಗಳು ಹಾಗಿದ್ದದ್ದರಿಂದ, ಅವರಿಬ್ಬರೂ ಒಂದು ದಿನವೂ ಅಗಲಿರಲಿಲ್ಲ. ಈಗ ನರಸಯ್ಯನಿಗೆ ಬೆಪ್ಪು ಹಿಡಿದುಬಿಟ್ಟಿತು. ಲಕ್ಷ್ಮಿಯ ಕಾಗದವನ್ನು ಹತ್ತು ಸಲ ಮತ್ತೆಮತ್ತೆ ಓದಿದ. ಅವಳು ಅವನಿಗೆ ಯಾವಾಗಲೂ ಕಾಗದವನ್ನು ಬರೆದಿರಲಿಲ್ಲ. ಇದೇ ಮೊದಲನೆಯದು. ಅವನಿಗೆ ಏನೂ ತೋಚದ ಹಾಗಾಯಿತು. ಆ ದಿವಸ ಅವನ ಜೀವನದಲ್ಲಿ ಮಾಮೂಲಿನ ವಿದ್ಯಮಾನಗಳ ಬದಲು ಎಲ್ಲಾ ತಲೆಕೆಳಗಿನ ವಿದ್ಯಮಾನ ಒದಗಿದವು. ಹೀಗಾಗುವುದೆಂದು ಅವನು ಎಣಿಸಿರಲಿಲ್ಲ. ಎದುರಿನ ಗೂಟಕ್ಕೆ ಲಕ್ಷ್ಮಿಯ ಕೆಂಪು ಜಾಕೀಟು ನೇತಾಡುತ್ತಿತ್ತು. ಹಿಂದೊಮ್ಮೆ ಅವನು ನಿನಗೆ ಕೆಂಪು ಜಾಕೀಟು ಬಹಳ ಲಕ್ಷಣವಾಗಿರುತ್ತದೆ ಎಂದು ಲಕ್ಷ್ಮಿಗೆ ಹೇಳಿದ್ದ. ಅಂದಿನಿಂದ

ಅವಳು ಯಾವಾಗಲೂ ಕೆಂಪು ಜಾಕೀಟನ್ನೇ ತೊಡುತ್ತಿದ್ದಳು. ಬಹುಶಃ ತಾನಿಲ್ಲದಿದ್ದಾಗ ತನ್ನ ನೆನಪು ಅವನಿಗೆ ಆಗಲೆಂದು ಆ ಜಾಕೀಟನ್ನು ಎದುರಿನ ಗೂಟಕ್ಕೆ ತಗಲು ಹಾಕಿದ್ದಳೋ ಏನೋ. ನರಸಯ್ಯನಿಗೆ ಬಹಳ ಬೇಜಾರಾಯಿತು. ಮನೆಯೆಲ್ಲಾ ಬಿಂ ಎನ್ನುತ್ತಿತ್ತು. ದೀಪವಿದ್ದರೂ ಮನೆಯಲ್ಲಿ ಬೆಳಕಿರಲಿಲ್ಲ. ತಾನಿದ್ದರೂ ಮನೆ ನಿರ್ಜನವಾಗಿತ್ತು. ಲಕ್ಷ್ಮಿ ಒಬ್ಬಳು ಬೇರೆ ಕಡೆಗೆ ಒಂದು ದಿನ ಹೋದರೆ, ಅವನ ಮನೆಯಲ್ಲಿ, ಅವನ ಜೀವನದಲ್ಲಿ, ಇಷ್ಟು ವ್ಯತ್ಯಾಸವಾಗುವುದೆಂದು ಅವನು ಅರಿತಿರಲಿಲ್ಲ. ಸ್ಮಶಾನದಲ್ಲಿ ಕುಳಿತವನ ಹಾಗೆ, ಏನು ಮಾಡಲಿಕ್ಕೂ ತೋಚದವನಾಗಿ ನರಸಯ್ಯ ಜೀವದ ಕಳೆಯೇ ಇಲ್ಲದ ತನ್ನ ಮನೆಯಲ್ಲಿ ಕುಳಿತುಬಿಟ್ಟ.

ಎಂಟು ಗಂಟೆಗೆ ಸರಿಯಾಗಿ ಅವರ ಮನೆ ಗಡಿಯಾರ "ಠಣ್ ಠಣ್" ಎಂದು ಎಂಟು ಸಲ ಹೊಡೆಯಿತು. ನರಸಯ್ಯ ಎಚ್ಚತ್ತು, ಬಚ್ಚಲ ಮನೆಗೆ ಹೋಗಿ ಕೈಕಾಲು ತೊಳೆದುಕೊಂಡು ಬಂದ. ಟವಲನ್ನು ತಂದುಕೊಡಲು ಎಂದಿನಂತೆ ಲಕ್ಷ್ಮಿ ಇರಲಿಲ್ಲ. ಟವಲನ್ನು ಹುಡುಕುವ ಹೊತ್ತಿಗೆ ಕಾಲಮೇಲಿನ ಒದ್ದೆ ತಾನಾಗಿಯೇ ಆರಿತ್ತು. ಟವಲನ್ನು ಹುಡುಕುವಾಗ ಆ ಕೆಂಪು ಜಾಕೀಟು ನರಸಯ್ಯನ ಮೈಗೆ ಸೋಕಿ ಅವನ ದೇಹ ಪುಳಕಿಸಿತು. ಲಕ್ಷ್ಮಿ ತನ್ನ ಜೀವನದಲ್ಲಿ ಅಷ್ಟು ಸಂಪೂರ್ಣವಾಗಿ ಬೆರೆತದ್ದು ಅವನಿಗೇ ಗೊತ್ತಿರಲಿಲ್ಲ. ಅವಳಿಲ್ಲದ ತನ್ನ ಒಂಟಿ ಜೀವನ, ಇಷ್ಟು ಬೇಡವಾಗುತ್ತದೆ ಎನ್ನುವುದೂ ಅವನಿಗೆ ತಿಳಿದಿರಲಿಲ್ಲ. ಅವನಿಗೆ ತಿಳಿಯದೆ, ಗೋಚರವಾಗದೆ, ಅವಳು ಅವನ ಜೀವನದ ಉಸಿರಾಗಿದ್ದಳು. ಎಷ್ಟು ಪ್ರಾಮುಖ್ಯವೋ ಅಷ್ಟೂ ಗೋಪ್ಯ, ಪಾನಕದಲ್ಲಿರುವ ಸಕ್ಕರೆಯಂತೆ. ಈಗ ಆ ಉಸಿರೇ ನಿಂತಿತ್ತು. ಕುಡಿಯುತ್ತಿರುವ ಪಾನಕದಲ್ಲಿ ಸಕ್ಕರೆಯೆ ಮಾಯವಾಗಿತ್ತು. ಲಕ್ಷ್ಮಿ ಮಾಯವಾಗಿದ್ದಳು. ಹತ್ತು ಹನ್ನೆರಡು ದಿನದಲ್ಲಿ ಬರುತ್ತಾಳೆ, ನಿಜವೆ. ಆದರೆ ಅವಳಿಲ್ಲದೆ ಅಷ್ಟು ದೀರ್ಘಕಾಲವನ್ನು ಕಳೆಯುವುದು ಹೇಗೆ?

ನರಸಯ್ಯ ಅಡಿಗೆ ಮನೆಗೆ ಹೋಗಿ ಅಡಿಗೆಗೆ ಮೊದಲಿಟ್ಟ. ಅದುವರೆಗೂ ಅವನಿಗೆ ಅಡಿಗೆಮಾಡುವ ಕಷ್ಟ ಗೊತ್ತಿರಲಿಲ್ಲ. ಅಡಿಗೆಮಾಡುವ ವಿಧಾನ ಗೊತ್ತಿತ್ತೇ ಹೊರತು ಮಾಡುವ ಕಷ್ಟ ತಿಳಿದಿರಲಿಲ್ಲ. ಒಲೆಯ ಮೇಲಿನ ಪಾತ್ರೆಗಳನ್ನು ಇಳಿಸುವಾಗ ಎರಡು ತಡವೆ ಕೈಗೆ ಬೊಬ್ಬೆ ಬಂತು. ಲಕ್ಷ್ಮಿ ಪ್ರತಿ

ನಿತ್ಯವೂ ಎಷ್ಟು ಕಷ್ಟಪಡುತ್ತಾಳೊ ಎಂದುಕೊಂಡ. ಕಟ್ಟಿಗೆ ಎಲ್ಲಾ ಹಸಿ. ಕಣ್ಣು ತುಂಬಾ ಹೊಗೆ. ಲಕ್ಷ್ಮಿ ಹೇಳುತ್ತಲೇ ಇದ್ದಳು–'ನೀವು ತರುವ ಕಟ್ಟಿಗೆ ಯೆಲ್ಲಾ ಹಸೀದು. ಕಣ್ಣು ಹಾಳಾಗಿ ಹೋಗುತ್ತೆ' ಎಂತ. ಅವನು ಆ ಮಾತನ್ನು ಲಕ್ಷ್ಯಕ್ಕೇ ತಂದುಕೊಂಡಿರಲಿಲ್ಲ. ಈ ಕಟ್ಟಿಗೆ ರೂಪಾಯಿಗೆ ಒಂದು ಮಣ ಹೆಚ್ಚು ಬರುತ್ತದೆ ಎಂದು ಈಗ ಎರಡು ವರ್ಷಗಳಿಂದಲೂ ಈ ಸೌದೆಯನ್ನೇ ತರಿಸುತ್ತಿದ್ದ. ಅಡಿಗೆ ಮನೆಯಲ್ಲಿ ಅಷ್ಟು ಪಾತ್ರೆಗಳಿರುವುದೇ ಅವನಿಗೆ ಗೊತ್ತಿರಲಿಲ್ಲ. ಅಷ್ಟೂ ಪಾತ್ರೆಗಳನ್ನೂ ಲಕ್ಷ್ಮಿ ಪ್ರತಿ ರಾತ್ರಿಯೂ ಊಟವಾದ ಮೇಲೆ ಏನೂ ಗೊಣಗುಟ್ಟದೆ ತಿಕ್ಕಿ ತೊಳೆಯುತ್ತಿದ್ದಳು. ತಾನೋ ಸುಬ್ಬಯ್ಯನವರ ಮನೆಯಲ್ಲಿ ಇಸ್ಪೇಟು ಆಡುತ್ತಿದ್ದ. ಒಂದು ದಿನವಾದರೂ ಅವಳ ಕಷ್ಟಕಾರ್ಯಗಳಲ್ಲಿ ನೆರವಾಗುತ್ತಿದ್ದನೆ? ಆ ರಾತ್ರಿ ತನಗೆ ತಾನೇ ಬಡಿಸಿಕೊಂಡಾಗ, ಅವನಿಗೆ ಪ್ರತಿ ನಿತ್ಯವೂ ಲಕ್ಷ್ಮಿ ತನಗೆ ತಾನೇ ಎರಡು ವರ್ಷಗಳಿಂದ ಬಡಿಸಿಕೊಳ್ಳುತ್ತಿದ್ದುದು ನೆನಪಿಗೆ ಬಂತು. ಛೆ, ತಾನೆಂತಹ ನೀಚ! ಅಷ್ಟಾದರೂ, ಲಕ್ಷ್ಮಿಗೆ ಬಡಿಸುವಷ್ಟಾದರೂ ನೆರವಾಗಬಾರದೆ? ಇಸ್ಪೇಟು ಆಡುವುದರ ಬದಲು. ಇನ್ನುಮುಂದೆ ಲಕ್ಷ್ಮಿಗೆ ಪ್ರತಿನಿತ್ಯವೂ ತಾನು ಬಡಿಸುವುದಾಗಿ ಸಂಕಲ್ಪಿಸಿಕೊಂಡ. ಒಣಗಿದ ಕಟ್ಟಿಗೆಯನ್ನೇ ತರುವುದಾಗಿ ನಿಶ್ಚಯಿಸಿದ. ಪ್ರತಿ ರಾತ್ರಿಯೂ ತನ್ನ ಊಟವಾದ ಮೇಲೆ ಲಕ್ಷ್ಮಿಗೆ ಅವಳ ಕೆಲಸಗಳಲ್ಲಿ ನೆರವಾಗಲು ಮನಸ್ಸುಮಾಡಿದ. ಅವನ ಕಣ್ಣು ಒದ್ದೆ - ಹೊಂ, ನಿಜವಾಗಿಯೂ ಒದ್ದೆಯಾದವು. ಲಕ್ಷ್ಮಿಯದು ಎಂಥ ತ್ಯಾಗ! ಅವಳಿಲ್ಲದಿದ್ದರೆ ಅವನ ಗತಿ ಏನು?

ಇದ್ದಕ್ಕಿದ್ದಹಾಗೆ ಬಾಗಿಲು ಧಡೀರನೆ ತೆರೆದು ಲಕ್ಷ್ಮಿ, ಲಚ್ಚಿ ಇಬ್ಬರೂ ಒಳಗೆ ಬಂದರು. ಲಕ್ಷ್ಮಿ ಹೊರಟುಹೋದದ್ದಕ್ಕೆ ನರಸಯ್ಯನಿಗೆ ಎಷ್ಟು ಮಂಕು ಬಡಿಯಿತೋ, ಈಗ ಅವಳು ಬಂದುದಕ್ಕೂ ಅವನಿಗೆ ಅಷ್ಟೇ ಮಂಕು ಹಿಡಿಯಿತು. ಲಕ್ಷ್ಮಿಯನ್ನು ಬಿಡಲು ಬಂದಿದ್ದ ಲಚ್ಚಿ ಹೊರಟುಹೋದ. ಲಕ್ಷ್ಮಿ, ಜತೆಯಲ್ಲಿ ತಂದಿದ್ದ ಬಟ್ಟೆಗಳನ್ನು ಕೆಳಗೆ ಹಾಕಿ "ಅಕ್ಕನಿಗೆ ಬರೀ ಹೊಟ್ಟೆಶೂಲೆಯಂತೆ. ಅಷ್ಟಕ್ಕೇ ಅವಳಿಗೆ ಹೆದರಿಕೆ ಆಯ್ತು. ಮನೆಯವರು ಹೆರಿಗೆ ಆಗುತ್ತದೆ ಅಂತ ಆಸ್ಪತ್ರೆಗೆ ಸೇರಿಸಿಬಿಟ್ಟರು. ಡಾಕ್ಟರು ಈಗ ಸರಿಯಾಗಿ ಪರೀಕ್ಷೆಮಾಡಿ ಬರೀ ಹೊಟ್ಟೆಶೂಲೆ ಎಂದರು. ಹೆರಿಗೆಗೆ ಇನ್ನೂ ಒಂದು

ತಿಂಗಳು ಆಗಬೇಕಂತೆ. ಪಾಪು ಹಾಲು ಹಾಕಿಸಿಕೊಳ್ಳಬೇಕಾಗಿತ್ತು" ಎನ್ನುತ್ತಾ ಲಕ್ಷ್ಮಿ ಅಡಿಗೆ ಮನೆಯೊಳಗೆ ಹೋದಳು.

ನಿಮಗಾರಿಗೂ ಕೇಳಿಸಲಿಲ್ಲವೆ ? ಇದುವರೆಗೂ ನಿಂತುಹೋಗಿದ್ದ ನರಸಯ್ಯನ ಮಾಮೂಲುಜೀವನದ ಗಡಿಯಾರ, ಲಕ್ಷ್ಮಿ ಧಡಾರೆಂದು ಬಾಗಿಲು ತೆರೆದು ಒಳಗೆ ಬಂದೊಡನೆ ಪ್ರಾರಂಭವಾದದ್ದು. ಇಲ್ಲವೇನು ? ಹಾಗಾದರೆ ನೋಡಿ.

ನರಸಯ್ಯನ ಮನೆಯಲ್ಲಿದ್ದ ಗಡಿಯಾರ ಗರ್ ಎಂದು ಶಬ್ದಮಾಡಿ ಒಂಭತ್ತು ಗಂಟೆ ಹೊಡೆಯಿತು. ನರಸಯ್ಯ ಮೆಲ್ಲನೆದ್ದು, ಶಾಲನ್ನು ಹೊದೆದು ಕೊಂಡ. ನಶ್ಯದ ಡಬ್ಬಿಯನ್ನು ಜೇಬಿನೊಳಗೆ ಹಾಕಿಕೊಂಡ. ಕೋಲನ್ನು ಕೈಲಿ ತೆಗೆದುಕೊಂಡ. ಇವೆಲ್ಲವನ್ನೂ ಗಮನಿಸುತ್ತಿದ್ದ ಲಕ್ಷ್ಮಿ ಮುಖವನ್ನು ಸಿಂಡರಿಸಿಕೊಂಡು "ಎಲ್ಲಿಗೆ ಹೋಗುತ್ತೀರಿ ?" ಎಂದು ಕೇಳಿದಳು.

"ಆಂ-ಎ-ಎಲ್ಲು-ಎಲ್ಲೂ ಇಲ್ಲಾ. ಇಲ್ಲೇ ಸುಬ್ಬಯ್ಯನವರ ಮನೆಗೆ ಹೋಗಿ, ನೀನು ಕೆಲಸಮಾಡುವಷ್ಟರಲ್ಲಿ ಎರಡಾಟ ಇಸ್ಪೇಟು ಆಡಿಕೊಂಡು ಬರುತ್ತೇನೆ."

---

'The Pendulum

# ಕೊರಚರ ಕೇರಿಯಲ್ಲಿ

ಬೆಂಗಳೂರು, ಚಾಮರಾಜಪೇಟೆಯ ಆ ಕಡೆಯೇ ಕೊರಚರ ಕೇರಿ ಇದೆ. ಸುಮಾರು ಇಪ್ಪತ್ತು ಇಪ್ಪತ್ತೈದು ಗುಡಿಸಿಲು. ಚೆನ್ನಾಗಿಯೇ ಕಟ್ಟಿ ದಾರೆ. ಮಧ್ಯೆ ವಿಶಾಲವಾಗಿ ಗುಂಡಗೆ ಬಯಲನ್ನು ಬಿಟ್ಟುಕೊಂಡು ಸುತ್ತಲೂ ಗುಡಿಸಿಲು ಕಟ್ಟಿದಾರೆ. ಎಲ್ಲಾ ಗುಡಿಸಿಲ ಬಾಗಿಲೂ ಬಯಲಿಗೆ ಎದುರಾಗಿವೆ. ರಾತ್ರಿ ಏಳೆಂಟು ಗಂಟೆ ಸಮಯಕ್ಕೆ ತಮ್ಮ ಊಟಗಳನ್ನು ಮುಗಿಸಿಕೊಂಡು, ಆ ಕೇರಿಯವರೆಲ್ಲಾ ಹೊರಗಡೆ ಅವರವರ ಗುಡಿಸಿಲ ಮುಂದೆ ಕುಳಿತುಬಿಡು ತ್ತಾರೆ. ರಾತ್ರಿ ಹತ್ತು ಹನ್ನೆರಡರ ವರೆಗೆ ದಿನವೂ ವಿನೋದ, ಜಗಳ, ಹರಟೆ, ಲಾವಣಿ, ಏನಾದರೊಂದು ನಡೆಯುತ್ತಲೇ ಇರುತ್ತದೆ. ಬೆಳುದಿಂಗಳ ಕಾಲ ಬಂದರೆ ಎಲ್ಲವೂ ಸ್ವಲ್ಪ ಹೆಚ್ಚಾಗಿಯೇ ನಡೆಯುತ್ತವೆ.

ಎಡಗಡೆ ಮಧ್ಯದ ಗುಡಿಸಲೇ ಮಾರಣ್ಣನದು. ಆವೊತ್ತು ರಾತ್ರಿ ಒಂಭತ್ತು ಗಂಟೆಯಾಗಿದ್ದರೂ ಮಾರಣ್ಣ ಇನ್ನೂ ಗುಡಿಸಿಲಿಗೆ ಹಿಂದಿರುಗಿರ ಲಿಲ್ಲ. ಅವನ ಹೆಂಡತಿ ಮಾದವ್ವ ಮುದ್ದೆ ಬೇಯಿಸಿಟ್ಟು ಅವನಿಗಾಗಿ ಕಾಯು ತ್ತಿದ್ದಳು. ಬಹಳ ಬೇಸರವಾಗಿದ್ದುದರಿಂದ ಅವಳು ಹೊರಗಡೆ ಹರಟೆಗೆ ಸೇರಿರಲಿಲ್ಲ. ಗುಡಿಸಿಲಲ್ಲೇ ಮಾರಣ್ಣನಿಗಾಗಿ ಕಾಯುತ್ತಾ ತೂಕಡಿಸು ತ್ತಿದ್ದಳು. ಮಾಡಿಟ್ಟಿದ್ದ ಮುದ್ದೆ ತಣ್ಣಗಾಗುತ್ತಾ ಇತ್ತು. ಅದರ ಬಿಸಿ ಎಲ್ಲವೂ ಮಾದವ್ವನ ಹೊಟ್ಟೆಯೊಳಗೆ ಸೇರಿಕೊಳ್ಳುತ್ತಿತ್ತು.

ಹತ್ತು ಗಂಟೆಗೆ ಸರಿಯಾಗಿ ಮಾರಣ್ಣ ಕೇರಿಗೆ ಹಿಂದಿರುಗಿ ಬಂದ. ಪದ್ಧತಿಯಂತೆ, ತನ್ನ ಹರಕು ಅಂಗಿಯನ್ನು ಎಡಹೆಗಲಿಗೆ ನೇತು ಹಾಕಿ ಕೊಂಡು, ಕೈಯಲ್ಲಿ ಮುಂಡಾಸು ಹಿಡಿದುಕೊಂಡು, ನೆರೆಹೊರೆಯವರನ್ನು

ಮಾತನಾಡಿಸುತ್ತಾ ಬಂದ: 'ಮುದ್ದಿ ತಿಂದಾಯ್ತೇ, ಗಿಡ್ಡಜ್ಜಿ?' . .
'ಪಿಳ್ಳೆ ಹೇಗಿದೆ ಕ್ಯಾತ?" . . 'ಬಟವಾಡೆ ಎಷ್ಟಾಯ್ತು ಬೇಲಣ್ಣ?' . '
'ಮೊನ್ನೆ ಲಗ್ನ ಆದ್ರೆ ಇವತ್ತೂ ಕೂಲಿಗೆ ಬರಬೇಡವಾ ನೀನು ದಾಸಪ್ಪ!"
"ನಿನ್ನ ಗಂಡನ್ನ ದುಡಿಯೋಕೂ ಬಿಡೋ ಹಾಗೆ ಕಾಣೊಲ್ಲ ಸಣ್ಣವ್ವ
ನೀನು!' . . . . .

ತನ್ನ ಗುಡಿಸಲ ಬಳಿ ಬಂದು ಬಾಗಿಲಿಗೆ ಇಳಿಬಿದ್ದಿದ್ದ ಈಚಲ ಚಾಪೆಯನ್ನು ಮೆಲ್ಲಗೆ ಓರೆಮಾಡಿಕೊಂಡು, ಹುಷಾರಾಗಿ ಒಳಹೊಕ್ಕ ಮಾರನಿಗೆ ಆಚ್ಚರಿಯಾಯಿತು. ತನ್ನ ಹೆಂಡತಿ ಕೋಪದಿಂದ ಗುರಿಯಿಟ್ಟು ಎಸೆಯುತ್ತಿದ್ದ ಮಡಕೆ ಚೂರುಗಳ ಬದಲು, ಆ ರಾತ್ರಿ ಅವನಿಗೆ ಹೆಂಡತಿಯ ಮಾತು ಸ್ವಾಗತನೀಡಿದವು. ಹೊರಗೆ ಚೆಲ್ಲಿದ್ದ ಹಾಲು ಬೆಳುದಿಂಗಳು ತನ್ನ ಹೆಂಡತಿಯ ಎದೆಯನ್ನು ಸ್ವಲ್ಪ ಮಿದುವಾಗಿ ಹೆಣ್ಣೆದೆಯಾಗಿ ಮಾಡಿರಬಹುದು ಎಂದುಕೊಂಡ.

"ಕೇಳಿಸಿತು ನೀ ಬಂದದ್ದು, ಎಲ್ಲಾರೊಡನೆ ಬಿನ್ನಾಣದ ಮಾತಾಡ್ತಾ 'ಮುದ್ದೀ ತಿಂದಾ ಗಿಡ್ಡಜ್ಜಿ!' ತಿನ್ನದೇ ಕೂತಿರುತ್ತಾಳೇನು ನನ್ನ ಹಾಗೆ ನಿನ್ನ ದಾರಿ ಕಾಯ್ತಾ? ಒಂದು ದಿನವಾದರೂ ನಿನ್ನ ಗತಿ ಏನೂ ಎಂದು ನನ್ನ ಕೇಳ್ತೀಯಾ? ಸತ್ಯಾ ಬದುಕ್ದಾ ಅಂತ ಕೇಳಿದೀಯಾ? ಮಾತಾಡಿಸ್ತಾನೆ ಎಲ್ಲರನ್ನೂ, ಮಹಾ ದೊಡ್ಡಮನುಷ್ಯನ ಹಾಗೆ. ಏಕೆ ಹೊತ್ತಾಗಿ ಬಂದಿ? ಎಲ್ಲಿಗೆ ಹೋಗಿದ್ದಿ? ಕೂಲಿ ಎಲ್ಲೀ? ಕುಡಿದು ಹಾಕಿಬಿಟ್ಯಾ?"

"ಥೂ ಕತ್ತೆ, ನೀನು ಬಾಯಿಬಿಟ್ರೆ ನನಗೆ ಛಳಿಜ್ವರ ಬರ್ತದೆ, ತಲೆ ನೋಯುತ್ತದೆ. ಬಾಯಿಗೆ ಬೀಗ ತಗಲಿಸ್ಕೊಂಡು ಮುದ್ದೆ ಮಡಗು. ಹೂಂ, ಹಾಗ್ಯಾಕೆ ನಿಂತೀ, ಕೋತಿ ಮುಸುಡಿ ಮಾಡಿಕೊಂಡು."

ಮಾದಿಯ ತುಟಿಗಳೆರಡೂ ಗಲ್ಲದ ಕಡೆ ಬಿಲ್ಲಿನಂತೆ ಬಾಗಿದವು. ಎದ್ದು ಕಂಭದಂತೆ ನಿಂತುಕೊಂಡು, ಮಾದಣ್ಣನನ್ನು ದುರದುರನೆ ನೋಡಿದಳು. ಮಾರನೂ ಕೂಡಲೇ ಸಿದ್ಧನಾದ. ಬಿಲ್ಲಿನಂತೆ ಅವಳ ತುಟಿ ಗಲ್ಲದ ಕಡೆ ಬಗ್ಗಿದರೆ ಮಾರನಿಗೆ ಗೊತ್ತು ಅದರ ಫಲಿತಾಂಶ: ತನ್ನ ಮೇಲೆ ಅವಳು ಮಡಕೆ ಚೂರುಗಳ, ಬೈಗಳ ಮಳೆ ಸುರಿಸುತ್ತಾಳೆಂಬುದು.

"ಏನೂ, ಕೋತಿ ಮುಸುಡೀನೇ ?" ಎಂದು ಗೊಣಗುಟ್ಟುತ್ತಾ ಮಾದವ್ವ ಹತ್ತಿರದಲ್ಲಿದ್ದ ಒಂದು ಮಣ್ಣಿನ ತಟ್ಟೆಯನ್ನು ತೆಗೆದುಕೊಂಡು ಮಾರನಿಗೆ ಗುರಿಯಿಟ್ಟು ಹೊಡೆದಳು. ಈ ಬಗೆಯಲ್ಲಿ ಹೆಚ್ಚಾಗಿ ಪಳಗಿದ್ದವನು ಮಾರ; ಓರೆಯಾಗಿ ನಿಂತು ಹೊಡೆತ ತಪ್ಪಿಸಿಕೊಂಡ. ತಟ್ಟೆ ಅವನ ಹಿಂದಿದ್ದ ತಡಿಕೆಗೆ ತಗಲಿ ಕೆಳಗೆ ಬಿದ್ದು ಪುಡಿಪುಡಿಯಾಯ್ತು. ಆ ಚೂರುಗಳ ಪೈಕಿ ನಾಲ್ಕೈದನ್ನು ತೆಗೆದುಕೊಂಡು ಮಾರ ಮಾದವ್ವನಿಗೆ ಹಿಂದಿರುಗಿಸಿಬಿಟ್ಟ. ಒಂದೆರಡು ಚೂರು ಮಾದಿಗೆ ತಗಲಿದವು. ಮುಂದೇನು ಬರಬಹುದೆಂದು ಊಹಿಸಿದ್ದ ಮಾರಣ್ಣ, ಮೂಲೆಯಲ್ಲಿದ್ದ ಮಡಕೆಯನ್ನು ಮಾದವ್ವ ತನ್ನೆಡೆಗೆ ಎಸೆಯುತ್ತಲೂ ಅದನ್ನು ಚಂಡಿನಂತೆ ಹಿಡಿದು, ಬಂದ ದಾರಿಯಲ್ಲೇ ಅದನ್ನು ರವಾನಿಸಿಬಿಟ್ಟ. ಗುರಿತಪ್ಪಿ ಮಡಕೆ ಮಾದವ್ವನ ಬಳಿ ಬಿದ್ದು ಚೂರುಚೂರಾ ಯಿತು. ಆ ರಾತ್ರಿಗೆ ಸಾಕಾಗುವಷ್ಟು ಬೋಕಿಗಳು ಇಬ್ಬರಿಗೂ ಒದಗಿದವು; ಇನ್ನು ಅವರ ಕದನ ಹೆಚ್ಚಿನ ಮಟ್ಟಕ್ಕೇ ಏರಿತು. ಎಂದಿಗಿಂತಲೂ ಹೆಚ್ಚಾ ಗಿಯೆ ಹೊಡೆತ ತಿಂದಿದ್ದರಿಂದ ಮಾದವ್ವನಿಗೆ ಬಹಳ ಸಿಟ್ಟುಬಂತು. ಹತ್ತಿರ ದಲ್ಲಿ ಮತ್ತೇನೂ ಸಿಗದೆ ಮುದ್ದೆ ಇಟ್ಟಿದ್ದ ತಟ್ಟೆಗೇ ಅವಳು ಕೈಹಾಕಿ ಎಳೆಯು ತ್ತಿರುವಷ್ಟರಲ್ಲಿ, ಎದುರು ಗುಡಿಸಿಲಿಂದ ಬಂದ ಚೀತ್ಕಾರಶಬ್ದ ಅವಳನ್ನು ತಡೆಗಟ್ಟಿತು.

ಒಂದೆರಡೇ ನಿಮಿಷಗಳ ಮೊದಲು ಅವರ ಗುಡಿಸಿಲ ಹಿಂದೆ ಬೀಟು ತಿರುಗಲು ಬರುತ್ತಿದ್ದ ಪೋಲೀಸ್ ಕಾನ್‌ಸ್ಟೇಬಲು ಭೀಮಣ್ಣ, ಮಾರ-ಮಾದವ್ವನ ಗುಡಿಸಿಲಿನಿಂದ ಕೇಳಿಬರುತ್ತಿದ್ದ ಮಡಕೆ ಒಡೆಯುವ ಶಬ್ದ, ಕೂಗಾಟ, ಗುದ್ದಾಟವನ್ನು ಕೇಳಿ "ಮಾದವ್ವ, ಮಾರಣ್ಣ ಕಾದಾಡ್ತಾ ಇದಾರೆ. ಓಹೋ ನಿಲ್ಲಿಸಲೆ? ಛೆ! ಪಾಪ, ಜಗಳಾಕಾಯುವಾಗಲೇ ಅವರು ಒಬ್ಬರಿ ಗೊಬ್ಬರು ಮಾತಾಡೋದು. ಏನಾದೀತು? ನಾಳೆ ಹೊಸ ಗಡಿಗೆ ಕೊಳ್ಳ ಬೇಕು, ಅಷ್ಟು ತಾನೆ" ಎಂದುಕೊಂಡ. ಅವನ ಆತ್ಮಗತ ಮುಗಿಯುವ ವೇಳೆಗೆ ಸರಿಯಾಗಿ ಮಾದವ್ವನನ್ನು ತಡೆಗಟ್ಟಿದ್ದ ಆ ಚೀತ್ಕಾರಧ್ವನಿ ಅವನ ಹೆಜ್ಜೆಯನ್ನೂ ತಡೆಯಿತು. ಅವನ ಮುಖ ಕೂಡಲೇ ಬಿಳುಪೇರಿ ಮೈಬೆವರಿ ದೇಹ ಕಂಪಿಸಲು, ಕೂಡಲೆ ಹಿಂದಕ್ಕೆ ತಿರುಗಿ "ಹ-ಹ-ಹಾ! ಬೆಕ್ಕು, ಬೆಕ್ಕಿನ

ಮರಿ ಕೂಗಿರಬಹುದು. ಅಷ್ಟೆ ಅಷ್ಟೆ" ಎಂದು ತನ್ನ ಕರ್ತವ್ಯಕ್ಕೆ ಸಮಾಧಾನ ಹೇಳಿ, ಊರಿನ ಕಡೆಗೆ ಸರಸರನೆ ಹೊರಟುಹೋದ.

ಆ ಚೀತ್ಕಾರ ಕೊರಚರ ಕೇರಿಯಲ್ಲಿ ಅವರವರ ಗುಡಿಸಿಲ ಮುಂದೆ ನಿಂತೋ ಕುಳಿತೋ ಮಲಗಿಯೋ, ಮಾತಾಡುತ್ತಾ, ತೂಕಡಿಸುತ್ತಾ, ನಿದ್ರಿಸುತ್ತಾ ಇದ್ದವರೆಲ್ಲರನ್ನೂ ಬೆಚ್ಚಿಸಿತು. ಪೋತಣ್ಣ ಹೌಹಾರಿ ನಿಂತು, ಅನಂತರ ಆಕಳಿಸಿ ಮೈಮುರಿದು, ತನಿಖೆಗೆ ಹೊರಟ; ಅವನಿಗೆ ಪೋಲೀಸ್ ಕೆಲಸದಿಂದ ವಜಾ ಆಗಿತ್ತು. ಸ್ವಲ್ಪ ಹೊತ್ತಿನಲ್ಲೇ ಅವನು ಎಲ್ಲವನ್ನೂ ವಿಚಾರಿಸಿಕೊಂಡು ಬಂದು ಎಲ್ಲರಿಗೂ ಸಮಾಚಾರ ತಿಳಿಸಿದ. ಗಿಡ್ಡಜ್ಜಿಯ ಕಡೆಯ ಮಗು ತಪ್ಪಿಸಿಕೊಂಡಿತ್ತು. ಅದಕ್ಕೇ ಗಿಡ್ಡಜ್ಜಿ ಚೀರಿದ್ದು. ಪೋತಣ್ಣ ಸಮಾಚಾರವನ್ನು ವ್ಯಕ್ತಗೊಳಿಸುತ್ತಿರುವಷ್ಟರಲ್ಲೆ ತನ್ನ ಗುಡಿಸಿಲಿನಿಂದ ಗಿಡ್ಡಜ್ಜಿ, ಗಿಡ್ಡಕ್ಕೆ, ದಪ್ಪಕ್ಕೆ, ಗುಂಡಕ್ಕೆ, ಮುಗ್ಗರಿಸುತ್ತಾ ಬೀಳುತ್ತಾ ಏಳುತ್ತಾ, ಅರಚುತ್ತಾ ಬಿಕ್ಕುತ್ತಾ ಅಳುತ್ತಾ ಬಂದಳು. ಎರಡುನೂರಾ ಇಪ್ಪತ್ತೆರಡು ಪೌಂಡು ತೂಕದ ಆಸಾಮಿ! ಬಿಕ್ಕಿಬಿಕ್ಕಿ ಅಳುತ್ತಿದ್ದಳು, ಅರುವತ್ತೈದು ಪೌಂಡು ತೂಕದ ಎಲುಬಿನ ಚೀಲ 'ಗೈರ್‌ವಿಲೆ'ಯಾದದ್ದಕ್ಕಾಗಿ. ವಿಷಾದ, ರೌದ್ರ, ಕಾರುಣ್ಯ – ಆ ರಸಗಳೆಲ್ಲವೂ ಕಣ್ಣೀರು, ಬೆವರು, ಜೊಲ್ಲುಗಳ ರೂಪಗಳಲ್ಲಿ ಗಿಡ್ಡಜ್ಜಿಯ ದೇಹದಿಂದ ಹೊರಸೂಸುತ್ತಿದ್ದವು. ಒಂದು ಸಲ ಅವಳು ಬಿಕ್ಕಳಿಸಿದಳು ಅಂದರೆ 'ಲಾಲ್‌ಬಾಗಿ'ನ ಹಿಂದಿರುವ ಗುಡ್ಡ ನಡುಗಿದ ಹಾಗಾಗುತ್ತಿತ್ತು.

ಹೊಸ ಹೆಂಡತಿಯ ಪಕ್ಕದಲ್ಲಿ ಕುಳಿತು ಪಿಸುಪಿಸು ಮಾತನಾಡುತ್ತಿದ್ದ ಬೈಲಣ್ಣನೂ, ಗಂಡನ ಮಾತಿಗೆ ಲಕ್ಷ್ಯಕೊಡದೆ ಅವನನ್ನೇ ನೋಡುತ್ತಿದ್ದ ನಾರವ್ವನೂ, ಒಬ್ಬರನ್ನೊಬ್ಬರು ತಬ್ಬಿಕೊಂಡು, 'ಹಯ್ಯೊ, ಹಯ್ಯೋ' ಎಂದು ತಮ್ಮ ಸಹಾನುಭೂತಿಯನ್ನು ವ್ಯಕ್ತಗೊಳಿಸಿದರು. ಮಧ್ಯದ ಗುಡಿಸಿಲಿನ ಅವಳಿಜವಳಿ ಮುದುಕಿಯರು-ಮುತ್ತಜ್ಜಿ, ಭೂತಜ್ಜಿ-ಇಬ್ಬರೂ ಒಂದೇ ಕಂಠದಿಂದ ನಿಧಾನವಾಗಿ "ಕಂಬೈೀ ಕೆಳಗಡೆ-ನೋಡ್ದೇ-ನವ್ವಾ" ಎಂದು ಪದ್ಯಕ್ಕೂ ಗದ್ಯಕ್ಕೂ ನಡುವೆ, ಹೆಚ್ಚುಕಡಿಮೆ ರಗಳೆಯಲ್ಲಿ ಹೇಳಿದರು. ಬಲಗಡೆ ಗುಡಿಸಿಲ ಮುಂದೆ ಹೆಂಡತಿಗೆ ಹೆದರಿ ಮೈಮುದುರಿ ಬಿದ್ದುಕೊಂಡಿದ್ದ ದಾಸಪ್ಪ ಸರಸರ ಎದ್ದು ಕುಳಿತು ಗಂಭೀರವಾಗಿ ಹರಕುಬಟ್ಟೆಯನ್ನು ತಲೆಗೆ ಸುತ್ತುತ್ತಾ "ಹೆದರಬೇಡ ಗಿಡ್ಡಜ್ಜಿ, ಈ ರಾತ್ರೆ ಬೆಂಗಳೂರನ್ನೆಲ್ಲಾ ಬಗೆದು ನಿನ್ನ ಪಿಳ್ಳೇನ ಹುಡು

ಕ್ಕೊಂಡು ಬರ್‍ತೀನಿ" ಎಂದು ಸಿಂಹನಾದ ಮಾಡಿದ. ಅವನ ಹೆಂಡತಿ ಬಟವಾಡೆ ದಿವಸ ಗಂಡನ ಜತೆಗೆ ಹೋಗಿ ಅವನಿಗೆ ಬಂದಿದ್ದ ಕೂಲಿ ಹಣವೆಲ್ಲವನ್ನೂ ಕಿತ್ತುಕೊಂಡು ಬಿಡುತ್ತಿದ್ದವಳು "ಹೋಗು ದಾಸ; ಗಾಡ ಹೋಗು. ಏಟು ಹೊತ್ತಾದ್ರೂ ನಾನು ನಿಂಗೆ ಕಾಯ್ತಾ ಇರ್‍ತೀನಿ'' ಎಂದಳು.

"ಮತ್ತೆ ಬೇಗ ನಾಕಾಣೆ ಕೊಡು. ಬಸ್ಸಿಗೆ ಬೇಕಾಗುತ್ತದೆ. ದಾರಿ ತಪ್ಪಿದ ಮಕ್ಕಳು ಬಲು ದೂರನಾಗ್ತವೆ" ಎಂದು ಹೆಂಡದಂಗಡಿಯನ್ನು ನೆನೆಯುತ್ತಾ ಹೆಂಡತಿಯಿಂದ ದಾಸ ನಾಲ್ಕಾಣೆ ಗಿಟ್ಟಿಸಿಕೊಂಡು ಓಡಿದ.

ಕಾಟಜ್ಜ, ಹಳೆಯ ಮುದುಕ, ಕೇಕರಿಸಿ ಉಗುಳಿ, ಗಂಟಲು ಸರಿಮಾಡಿಕೊಂಡು "ನೀನು ಪಿಳ್ಳೇನ ಯಾವಾಗ ನೋಡಿದೀ?" ಎಂದು ವಿಚಾರಿಸಿದ. "ನಾನೇ? ಸಂಜೇಲಿ ನೋಡಿದೆ, ಅಲ್ಲ-ಅಲ್ಲ-ಸಂಜೇಲಿ ನೋಡಿದ್ದು ಸಣ್ಣಸಿದ್ದನ್ನ. ಪಿಳ್ಳೇನ ವತ್ತಾರೆ ಕೂಲಿಗೆ ಹೋಗುವಾಗ ನೋಡಿದ್ದೆ. ಅಲ್ಲಿ ಮಣ್ಣಾಗೆ ಉರುಳಾಡ್ತಾ ಇದ್ದ. ರಾತ್ರೆ ನಾನು ಬಂದಾಗ ಎಲ್ಲರೂ ಮುದ್ದೆ ತಿಂದು ಮಲಗಿದ್ದರು. ನಾನು ಈಗ ಮಲಗೋಕೆ ಹೋಗ್ತೀನೆ, ಪಕ್ಕದಾಗ ಪಿಳ್ಳೇನೆ ಇಲ್ಲ. ಆಯ್ಯೋ-ಆಯ್ಯೋ-ನನ್ನ ಮಗು........"

ಮಗು ತಪ್ಪಿಸಿಕೊಂಡಿದೆ ಎನ್ನುವ ಸಂಗತಿ ಎಂಥ ಕಠಿನ ಹೃದಯರನ್ನೂ ಕರಗಿಸುತ್ತದೆ. ಯಾರೇ ಆಗಲಿ, ಯಾವ ಕೆಲಸಕ್ಕೇ ಹೋಗುತ್ತಿರಲಿ, ಒಂದು ಕ್ಷಣ ನಿಂತುಕೊಂಡು ಅಯ್ಯೋ ಪಾಪ ಎಂದು ತಮ್ಮ ಮರುಕವನ್ನು ಸೂಚಿಸುತ್ತಾರೆ. ಮಗುವನ್ನು ಹುಡುಕಲು ಗುಂಪುಗುಂಪೇ ಹೊರಡುತ್ತದೆ. ಆದ್ದರಿಂದಲೇ ಈ ಸಮಾಚಾರ ಕೇಳಿ ಮಾರಣ್ಣ ಮಾದವ್ವ ತಮ್ಮ ಕದನಕ್ಕೆ ವಿರಾಮಕೊಟ್ಟು ಗುಡಿಸಿಲ ಹೊರಗೆ ಬಂದು ನಿಂತರು.

"ಪಾಪ, ಗಿಡ್ಡಜ್ಜಿಯ ಪಿಳ್ಳೆ ತಪ್ಪಿಸಿಕೊಂಡಿದೆಯಂತೆ" ಮಾದವ್ವ ಮುಲುಗಿದಳು.

"ಪಿಳ್ಳೆ ತಪ್ಪಿಸಿಕೊಂಡಿದೆ ಅಂತ ನಾನೂ ಅಯ್ಯೋ ಅಂತೀನಿ. ಹೆಂಡತೀರು ಯಾರಾದರೂ ತಪ್ಪಿಸಿಕೊಂಡಿದ್ರೆ-ಹೋಗ್ಲಿ ಪೀಡೆ ಅಂತಿದ್ದೆ. ಪಿಳ್ಳೆ ತಪ್ಪಿಸಿಕೊಂಡಿದೆ-ಅಯ್ಯೋ ಪಾಪ."

ಮಾರಣ್ಣನ ಮಾತಿನಲ್ಲಿದ್ದ ಕೆಣಕಿಗೆ ಮಾದವ್ವ ಲಕ್ಷ್ಯ ಕೊಡಲಿಲ್ಲ.

ಅವಳ ಮನಸ್ಸೆಲ್ಲವೂ ತಪ್ಪಿಸಿಕೊಂಡಿದ್ದ ಮಗುವಿಗಾಗಿ ಹಾತೊರೆಯುತ್ತಿದ್ದ ಗಿಡ್ಡಜ್ಜಿಯ ದುಃಖದಲ್ಲಿ ಬೆರೆತಿತ್ತು. ಆದ್ದರಿಂದ ಸೌಮ್ಯವಾಗಿಯೆ "ಮಾರ, ಗಿಡ್ಡಜ್ಜಿಯ ಪಿಳ್ಳೆ ತಪ್ಪಿಸಿಕೊಂಡಿದ್ದು ಅನ್ಯಾಯ ಆಯ್ತು. ಈ ಊರು ಬಲು ದೊಡ್ಡದು. ರೈಲು, ಮೋಟರು, ಬೈಸ್ಕಲ್ಲು ಹಾವಳಿ ಇದ್ದೇ ಇರುತ್ತದೆ. ನಮಗೂ ಈಗ ಎಂಟು ವರಸದ ಹಿಂದೆ ಮಗ ಆಗಿದ್ರೆ ಅದಕ್ಕೂ ಈಗ ಎಂಟು ವರಸ ಆಗ್ತಿತ್ತು, ಅಲ್ವೇ?" ಎಂದಳು ; ಮೆಲ್ಲನೆ ನುಡಿದಳು.

"ನಮಗೆ ಆಗ್ಲೇ ಇಲ್ವಲ್ಲ" ಎಂದು ವಾಸ್ತವಕ್ಕೇ ಜೋತುಬಿದ್ದ ಮಾರ ಹೇಳಿದ.

"ಆಗ್ಲಿಲ್ಲ ಸರಿ. ಆಗಿದ್ರೇ ಆ ನಮ್ಮ ಪಿಳ್ಳೆ, ನಮ್ಮ ಪುಟ್ಟ ಮಾದ, ಈ ರಾತ್ರಿ ತಪ್ಪಿಸಿಕೊಂಡಿದ್ರೆ ನಮಗೆ ಹೊಟ್ಟ್ಯಾಗೆ ಹೆಂಗಾಗ್ತಿತ್ತು?"

"ಏನು ಹುಚ್ಚ್ಚುಮಾತು ನಿಂದು! ಅದರ ಹೆಸರು ಮಾದ ಅಂತ ಆಗ್ತಿರ ಲಿಲ್ಲ. ಖಂಡಿತ ಇಲ್ಲ. ಆ ಹೆಸರು ಕಂಡ್ರೆ ನನಗೆ ಆಗದು. ಸಣ್ಣ ಮಾರ ಅಂತ ಕರೀತಿದ್ದೆ, ತಿಳೀತೇ."

"ನಿನ್ನ ತಲೆ. ಮಾರ ಅನ್ನೋ ಹೆಸರು ತಿರುಗಿ ನಮ್ಮ ಗುಡ್ಲಾಗೆ ಸುಳಿ ಯೋಕೆ ಆಗದು. ಇರೋ ಒಂದು ಹೆಸರ ಕಾಟವೇ ಸಾಕಾಗಿದೆ."

ಅನಂತರ ಇಬ್ಬರೂ ಸ್ವಲ್ಪಹೊತ್ತು ತಮ್ಮ ಗುಡಿಸಿಲ ಮುಂದೆಯೇ ನಿಂತು, ಗಿಡ್ಡಜ್ಜಿ ಹೂಡಿದ್ದ ಗೊಂದಲವನ್ನು ಗಮನಿಸುತ್ತಿದ್ದರು. ಆಮೇಲೆ ಮಾದವ್ವ ಪುನಃ, "ಮಾರ, ಇವೊತ್ತು ನಾನು ನಿನ್ನಮೇಲೆ ಛಾಳ ಸಿಟ್ಟು ಮಾಡಿದೆ ಅಲ್ವೆ? ನೀನು ಹೊತ್ತಾಗಿ ಬಂದಿ ; ಅದಕ್ಕೆ ನನಗೆ ಸಿಟ್ಟು ಬಂತು. ಇನ್ನುಮೇಲೆ ಜಗಳ ಕಾಯೊಲ್ಲಾ" ಎಂದಳು.

ಮಾದವ್ವನ ಹೆಗಲಮೇಲೆ ಕೈಯಿಟ್ಟು ಮಾರ, "ನಾನೂ ಜಗಳ ಕಾಯೊಲ್ಲಾ ಮಾದಿ! ನೀ ಏನಂದ್ರೂ ಸುಮ್‌ಕಿರ್ತೀನೆ" ಎಂದ.

ಪ್ರಶಾಂತವಾದ ಬೆಳುದಿಂಗಳು ಅವರ ಮುಂದೆ ನಲಿಯುತ್ತಿತ್ತು. ಮಾದಿ "ಗಿಡ್ಡಜ್ಜಿಯ ಗೋಳು ಕೇಳಲಾರೆ ನಾನು. ಆ ಪಿಳ್ಳೇನ ಕಳಕೊಂಡು ಅವಳು ಹೇಗೆ ಬದುಕಿರುತ್ತಾಳೆ? ನಮ್ಮ ಪುಟ್ಟ ಮಾದ ಏನಾರೆ ತಪ್ಪಿಸಿಕೊಂಡಿದ್ರೆ ನನ್ನ ಗತಿ ಏನಾಗ್ತಿತ್ತು?" ಎಂದು ನಿಟ್ಟುಸಿರು ಬಿಟ್ಟಳು.

ಮಾದಿಯ ಭುಜದ ಮೇಲಿಟ್ಟಿದ್ದ ತನ್ನ ಕೈಯನ್ನು ಮಾರ ಮೆಲ್ಲನೆ ಕೆಳಗಿಳಿಸಿ, ಅವಳ ಹತ್ತಿರಕ್ಕೆ ಬಂದು, ಅದೇ ಕೈಯಿಂದ ಅವಳ ನಡುವನ್ನು ಅದಷ್ಟು ಸುತ್ತಿ, "ನಿನ್ನ ಗತಿ ಹಾಗಿರ್ಲಿ ಮಾದಿ! ನನಗೆ ಹಾಗಾಗಿದ್ರೆ, ನಮ್ಮ ಪಿಳ್ಳೆ, ನನ್ನ ಸಣ್ಣಮಾರ, ತಪ್ಪಿಸಿಕೊಂಡಿದ್ರೆ ಆ ಮಗನ ಕಳವು ಮಾಡಿದವರನ್ನ ಈ ರಾತ್ರೀನೆ ಕಡಿದುಹಾಕ್ತಿದ್ದೆ" ಎಂದ.

ಅನಂತರ ಇಬ್ಬರೂ ಒತ್ತಾಗಿ ನಿಂತು ಬೆಳುದಿಂಗಳ ಸ್ನಾನಮಾಡುತ್ತಾ ತಮ್ಮೆದುರಿಗೇ ನಡೆಯುತ್ತಿದ್ದ ಗಿಡ್ಡಜ್ಜಿಯ ಮಗು ತಪ್ಪಿಸಿಕೊಂಡಿದ್ದ ಪ್ರಕರಣವನ್ನು ನೋಡುತ್ತಾ ನಿಂತರು.

ಇದ್ದಕ್ಕಿದ್ದ ಹಾಗೆ ಅಲ್ಲಲ್ಲಿ ಗುಜುಗುಜು ಎದ್ದಿತು. ಕೆಲವರು ಗಿಡ್ಡಜ್ಜಿಯ ಗುಡಿಸಿಲ ಕಡೆಗೆ ನುಗ್ಗಿದರು.

ಸಾಕವ್ವ, ಮುತ್ತಜ್ಜಿ ಇಬ್ಬರೂ ಒಟ್ಟಿಗೆ ಒಂದೇ ಸ್ವರದಲ್ಲಿ, ನಿಧಾನವಾಗಿ "ಏನದೂ, ಪಿಳ್ಳೆ ಸಿಕ್ತೇ?" ಎಂದು ನುಡಿದರು.

ತನಿಖೆ ನಡೆಯಿಸುತ್ತಿದ್ದ ಪೋತಣ್ಣ ಹೆಮ್ಮೆಯಿಂದ ಅರಳಿದ ಮುಖ ತೋರಿಸುತ್ತ ಗಿಡ್ಡಜ್ಜಿಯ ಗುಡಿಸಿಲಿನಿಂದ ಹೊರಕ್ಕೆಬಂದು ನನಗೆ "ಅನುಮಾನ ಆಯ್ತು. ಅದಕ್ಕೇ ಈಗ ಅರ್ಧಗಂಟೆಯಿಂದ ನಾನು ಗಿಡ್ಡಜ್ಜಿಯ ಗುಡ್ಲಾಗೇ ನಿಧಾನವಾಗಿ ಒಂದು ಕಡೆಯಿಂದ ಹುಡುಕಿಕೊಂಡು ಬಂದೆ. ಹಿಂದುಗಡೆ ಮೂಲೇಲಿ, ಪಿಳ್ಳೆ ಕಂಬಳೀನ ಮೈಗೆ ಸುರುಳಿಸುತ್ತಿ ಬಿದ್ದುಕೊಂಡಿದೆ. ನನಗೆ ಅನುಮಾನ ಆಗಿತ್ತು!" ಎಂದು ತನ್ನ ಬುದ್ಧಿವಂತಿಕೆಯನ್ನು ಪ್ರದರ್ಶಿಸಿದ.

ಮಾರಣ್ಣ ಮಾದವ್ವನಿಗೆ ವ್ಯಂಗ್ಯವಾಗಿ "ನೋಡಿದೋ, ನಿನ್ನ ಮಾದ ಆಗಿದ್ರೆ ಎಂಥಾ ಹಲ್ಕಾ ಕೆಲಸಮಾಡ್ತಿದ್ದಾ ಅಂತ, ಹಲ್ಕಾ ಕೆಲಸ! ಕಂಬ್ಳೀಲಿ ಮೈಸುತ್ತಿ ಮೂಲೇಲಿ ಬಿದ್ದುಕೊಂಡು ಗದ್ದಲ ಹೂಡೋದು. ನನ್ನ ಸಣ್ಣಮಾರ ಆಗಿದ್ರೆ ಹಾಗೆ, ನಿನ್ನ ಮಾದನ ಹಾಗೆ, ನಾಯಿಕುನ್ನೀ ಹಾಗೆ, ಮೂಲೇಲಿ ಬಿದ್ದಿರುತಿದ್ನೆ?"

ಮಾದಿಯ ಮುಖ ಕಲ್ಲಿನಂತಾಯಿತು. ಮಾರನ ಮಾತು ಮುಗಿಯುವ ಹೊತ್ತಿಗೆ ಅವಳ ತುಟಿ ಗಲ್ಲದ ಕಡೆಗೆ ಬಿಲ್ಲಿನಂತೆ ಬಗ್ಗಿದವು. ಒಂದು ನಿಮಿಷ ಮಾರನನ್ನು ದುರದುರ ನೋಡಿ 'ಏನೂ, ನಾಯಿಕುನ್ನೀನೇ ನನ್ನ ಮಾದ?"

ಎಂದು ಗೊಣಗುಟ್ಟುತ್ತಾ ಸೆಟೆದುಕೊಂಡು ಗುಡಿಸಿಲಿನೊಳಗೆ ಹೋದಳು. ಕದನಕ್ಕೆ ಸಿದ್ಧನಾಗಿ ಮಾರ ಹೆಂಡತಿಯನ್ನು ಹಿಂಬಾಲಿಸಿದ.

* * * *

ಎರಡನೆಯ ಸಲ ಅಲ್ಲಿಗೆ ಬೀಟು ತಿರುಗಲು ಬಂದ ಭೀಮಣ್ಣ, ಮಾದವ್ವ ಮಾರಣ್ಣನ ಗುಡಿಸಿಲ ಹಿಂದೆ ಬರುತ್ತಿದ್ದಾಗ, ಅವರ ಗುದ್ದಾಟ ಕೇಳಿ ಅಚ್ಚರಿಗೊಂಡು "ಅಯ್ಯೋ ದೇವರೆ, ಆವಾಗಿನಿಂದ ಇನ್ನೂ ಗುದ್ದಾಡ್ತಾ ಇದಾರೆ. ಇವೊತ್ತು ಭಾಳ ಮಾತಾಡಬೇಕೆಂದಿದಾರೋ? ಅಥ್ವಾ, ಮುಂದಲ ವಾರದ ಕುಸ್ತಿಗೆ ತಯಾರಿ ತಗೋತಾ ಇದ್ದಾನೋ ಮಾರ!" ಎಂದುಕೊಂಡ.

---

Between Rounds

# ವಾಸನಾ

ಅವಳು ಗಹಗಹಿಸಿ ನಕ್ಕಳು; "ಮದುವೆ ಆಗ್ತಾನಂತೆ, ಮದುವೆ....
ನನ್ನ! ಬಸವಿ ಬಿಟ್ಟವಳನ್ನ !!" —ಆಕೆಯ ಗಲ್ಲದ ತುದಿಯ ಮೇಲಿನ ಕಾಸಿ
ನಗಲದ ನೀಲಿ ಮಚ್ಚೆಯೂ ಕಳಕಳಿಸಿ ನಗುತ್ತಿತ್ತು.

ಆಕೆ ಮುಡಿದ ಕೆಂಡಸಂಪಿಗೆ ಹೂವಿನ ಕೂರುಗಂಪು ಆತನ ಮೂಗನ್ನು
ಉಚ್ಚುತ್ತಿತ್ತು. ಆಕೆಯ ಚುಚ್ಚು ಮಾತೂ ಕೆಚ್ಚುನಗೆಯೂ ಆತನಿಗೆ ಬಲ
ವನ್ನೇ ಕೊಟ್ಟವು. ಗಂಭೀರ ಧ್ವನಿಯಿಂದ, ದೃಢತೆಯಿಂದ "ಹೌದು,
ಮದುವೆ ಆಗ್ತೇನೆ, ಮದುವೆ. ನಿನ್ನ .... ಬಸವಿಯನ್ನ" ಎಂದ, ಅವಳನ್ನೇ
ದಿಟ್ಟಿಸಿನೋಡುತ್ತಾ.

ಅವಳೂ ಆತನನ್ನು ದಿಟ್ಟಿಸಿ ನೋಡಿದಳು. ಅವನಲ್ಲಿ ಕಾಮದ ಆತುರತೆ
ಇರಲಿಲ್ಲ; ಪ್ರೇಮದ ಸಾವಧಾನವಿತ್ತು. ಮೋಹದ ಕಾತರವಿರಲಿಲ್ಲ; ಒಲ
ವಿನ ಶಾಂತತೆ ಇತ್ತು. ಆಕೆ ಗಂಭೀರಮುಖಿಯಾದಳು. ಅನಂತರ ಅವಳ
ಕಣ್ಣು ಹನಿಗಟ್ಟಿದವು. ನಿಜ, ಆತನನ್ನು ಆಕೆ ಸಂಪೂರ್ಣವಾಗಿ ಪ್ರೀತಿಸು
ತ್ತಿದ್ದುದು ನಿಜ. ಅದನ್ನು ಅವಳು ಬಿಚ್ಚಿಡದೆ ಬಚ್ಚಿಟ್ಟಿದ್ದೂ ನಿಜ. ಆತ
ಆಕೆಯನ್ನು ತನ್ನವಳೆಂದೇ ಭಾವಿಸಿದ್ದೂ ನಿಜ. ಬಸವಿಗೆ ಮಾರುಹೋದವ
ನೆಂದು, ಬಸವಿಯನ್ನು ಲಗ್ನವಾದವನೆಂದು ಹಳ್ಳಿಯವರೆಲ್ಲರೂ ಆತನನ್ನು
ಅಪಹಾಸ್ಯ ಮಾಡುವುದನ್ನು ತಪ್ಪಿಸುವುದಕ್ಕಾಗಿ, ಅಲ್ಲಿಯ ಮುಖಂಡನೆನಿಸಿದ
ಅವನ ಸ್ಥಾನಮಾನಗಳನ್ನು ಕಾಪಾಡುವ ಸಲುವಾಗಿ, ಆತನಿಗಾಗಿ, ಆಕೆ ಆತ
ನನ್ನು ತಿರಸ್ಕರಿಸಿದಂತೆ ತೋರಗೊಡುತ್ತಿದ್ದಳು. ತಾನು 'ಹೂ' ಎಂದರೆ
ಸಾಕು, ಮರುದಿನವೇ ಆತ ತನ್ನನ್ನು ಲಗ್ನವಾಗುವನೆಂದು ಆಕೆಗೆ ಗೊತ್ತಿತ್ತು!
ಆದರೆ ಅವನಿಗಾಗಿ, ಬಾಳಿನಲ್ಲಿ ತನ್ನ ಪಾಲಿಗೆ ಬಂದ ಬಸವಿತುತ್ತನ್ನಷ್ಟೇ
ಭುಂಜಿಸಿರಲು ಸಿದ್ಧಳಾಗಿದ್ದಳು ಆ ಬಸವಿ.... ಚಿರತ್ಯಾಗಿನಿ.

"ಇಲ್ಲ. ನಾನು ನಿನ್ನನ್ನು ಲಗ್ನ ಆಗೋದಿಲ್ಲ. ನಿನಗೆ ಸರಿಯಲ್ಲ ಅದು. ನಾನು ಬೆಂಗಳೂರು ಪೇಟೆಗೆ ಹೋಗ್ತೇನೆ. ನನ್ನನ್ನು ಮರೆತುಬಿಡು" ಎಂದಳು.

* * * *

ಆಕೆ ಒಂದು ದಿನ ಇದ್ದಕ್ಕಿದ್ದ ಹಾಗೆ ಹಳ್ಳಿಯಿಂದ ಹೊರಟು ಹೋದದ್ದು ಊರಿನವರಿಗಾರಿಗೂ ಅಚ್ಚರಿ ಎನಿಸಲಿಲ್ಲ. ಹಳಬರಿಗೆಲ್ಲಾ ಅನುಭವದಿಂದ ಗೊತ್ತಿತ್ತು,—ಹಳ್ಳಿಯ ಬಸವಿ ಇಂದಲ್ಲ ನಾಳೆ ಬೆಂಗಳೂರಿಗೆ ಹೋಗ್ತಾಳೆ ಅಂತ. ಬೆಂಗಳೂರು ಹತ್ತೇ ಮೈಲಿ.

ಬೆಂಗಳೂರು! ಯಾವ ಬಗೆಯ ಜನ ಇಲ್ಲ, ಯಾವ ತರದ ದುಡಿಮೆ ಇಲ್ಲ – ಅಲ್ಲಿ. ಅಲ್ಲಿ ಅವಳನ್ನು ಹುಡುಕಲು ತೊಡಗಿದ ಆತ. ನಾಟಕದ ಕಂಪೆನಿಗಳಲ್ಲೆಲ್ಲಾ ವಿಚಾರಿಸಿದ. ನೋಡಲಿಕ್ಕೆ ಚೆನ್ನಾಗಿದ್ದಾಳೆ; ಚೆನ್ನಾಗಿ ಹಾಡುತ್ತಾಳೆ, ನಾಟಕ ಸೇರಿರಬಹುದು ಅಂತ. ಸಿಗಲಿಲ್ಲ. ಬಡವರ ಕೇರಿಗಳು, ಗುಡಿಸಲುಗಳು ಮುಗಿದವು. ಭಿಕ್ಷುಕರ ಗುಂಪು ಆಯಿತು. ಹೋಟಲುಗಳ ಮುಂದೆ, ಮಾರ್ಕೆಟ್ಟಿನಲ್ಲಿ, ಪೇಟೆಗಳಲ್ಲಿ ಹುಡುಕಿದ. ಇಲ್ಲ, ಸುಳುವಿಲ್ಲ. ಆತನಿಗೆ ಬೇಜಾರಾಗಲಿಲ್ಲ. ಹಗಲೆನ್ನದೆ ರಾತ್ರಿಯೆನ್ನದೆ, ಮಳೆಬಿಸಿಲೆನ್ನದೆ, ಬೆಂಗಳೂರಿನಲ್ಲಿ ಅಲೆದು ಅಲೆದು ಅವಳನ್ನು ಹುಡುಕಿದ. ಒಂದು ಕಡೆಯಿಂದ ಬೆಂಗಳೂರನ್ನೆಲ್ಲಾ ಗುಡಿಸಿಕೊಂಡು ಬರುವವನಂತೆ ಆಕೆಗಾಗಿ ಶೋಧಿಸಿದ. ಎಲ್ಲಾ ಗಿರಣಿಗಳು, ಗಿರಣಿ ಕೂಲಿಕಾರರ ಕೇರಿಗಳು, ಅಕ್ಕಿಪೇಟೆ, ಹತ್ತಿಪೇಟೆ, ಚಿಕ್ಕಪೇಟೆ, ಬಳೇಪೇಟೆ, ಒಂದೊಂದಾಗಿ ಮುಗಿದವು. ಆಕೆ ಸಿಗಲಿಲ್ಲ; ಆತ ಬಿಡಲಿಲ್ಲ. ದುಡಿಯುತ್ತೇನೆ ಎಂದು ಬಂದ ಹರೆಯದ ಹುಡುಗಿ, ಬಸವಿಯಾದ ಚಿನ್ನಾಣಗಿತ್ತಿ, ಬೆಂಗಳೂರು ಪೇಟೆಯಲ್ಲಿ ಯಾವ ಗತಿಗೆ ಬರಲಿಕ್ಕಿಲ್ಲ ಎಂಬುದು ಅವನಿಗೆ ತಿಳಿಯದಿರಲಿಲ್ಲ. ಅಂತಲೇ ಅವನು ಹುಡುಕಬಾರದ ಕಡೆ ಹೋಗಬಾರದ ಕಡೆ ಹುಡುಕಿದ, ಹೊಕ್ಕ. ಉಹುಂ, ಸದ್ಯ ಇಲ್ಲ. ಒಂಟಿಯಾಗಿರುವ ಹುಡುಗಿಯರಿಗೆ ಆಹ್ವಾನವಿತ್ತು, ತಮ್ಮ ಮನೆಯಲ್ಲಿ ಒಂದೆರಡು ಕೋಣೆಗಳನ್ನು ಅವರಿಗೆ ಬಾಡಿಗೆಗೆ ಕೊಟ್ಟು, ಅನಂತರ ಅವರನ್ನೇ ಬಾಡಿಗೆ ವಸ್ತುಗಳನ್ನಾಗಿ ದುಡಿಸುವಂಥವರ ಮನೆಗಳನ್ನೂ ಆತ ಬಿಡಲಿಲ್ಲ. ಇಲ್ಲ, ಅಲ್ಲಿ ಸಿಗಲಿಲ್ಲ; ದೇವರ ದಯೆ!

ಒಂದು ದಿನ ತಾನು ಅದುವರೆಗೆ ಹುಡುಕಿದ ಕೇರಿಯನ್ನು ಬಿಟ್ಟು ಬೇರೊಂದು ಕೇರಿಗೆ ಹುಡುಕಲು ಬಂದ. ಅಲ್ಲಿ ತಾನು ತಂಗಿರಲು ಒಂದು ಕೋಣೆಯನ್ನು ಹುಡುಕುತ್ತಾ ಒಂದು ಮನೆ ಬಳಿಗೆ ಬಂದು ಬಾಗಿಲು ತಟ್ಟಿದ. ಬಾಗಿಲು ತೆಗೆದು ಹೊಸಲ ಬಳಿ ನಿಂತಳು ಒಬ್ಬ ಮುದುಕಿ— ಹುತ್ತದಲ್ಲಿನ ಹಾವಿನಂತೆ.

"ಬಾಡಿಗೆಗೆ ಕೋಣೆ ಇದೆಯೆ" ಎಂದು ಕೇಳಿದ.

ಆಕೆ ಆತನನ್ನು ಒಳಗೆ ಕರೆದುಕೊಂಡು ಹೋದಳು. ಕೊಳಕು ಮನೆ, ಕತ್ತಲು ಗವಿ. ಒಳಗೆ ಹೋದರೆ ಉಸಿರು ಕಟ್ಟುವಂತಿತ್ತು. ಆ ಮನೆಯೊಳಗೆ ಒಂದು ಕೊಠಡಿ. ಅದರೊಳಗೆ ಇಬ್ಬರೂ ಬಂದರು.

"ಈ ಕೋಣೆ ಇದೆಯಪ್ಪ. ಇದನ್ನು ಬಾಡಿಗೆಗೆ ಕೊಡುತ್ತೇನೆ. ನಾನು ಒಳ್ಳೇ ಜನಕ್ಕೇ ಬಾಡಿಗೆಗೆ ಕೊಡುತ್ತಾ ಬಂದಿರೋದು. ಅಂಥ ಇಂಥಾವರನ್ನು ಸೇರಿಸುವುದಲ್ಲ. ನನಗೆ ಕೂಲಿನಾಲಿಯಿಂದ ಬರೋ ಮೂರು ಕಾಸಿಗೆ ಈ ಬಾಡಿಗೇನೂ ಸೇರಿದರೆ ಹೊಟ್ಟೇಗೂ ಬಟ್ಟೇಗೂ ಆಗುತ್ತದೆ ಅಂತ ಬಾಡಿಗೆಗೆ ಕೊಡುತ್ತೇನೆ, ಅಷ್ಟೆ—ಅದೂ ಒಳ್ಳೇ ಜನಕ್ಕೆ ಮಾತ್ರ. ತಿಂಗಳಿಗೆ ಎರಡೂ ವರೆ ರೂಪಾಯಿ. ಮುಂಚೆಯೇ ಕೊಟ್ಟು ಬಿಡಬೇಕು. ಈ ಕೋಣೆ ಖಾಲಿ ಇರೋದು ಅಪರೂಪ."

"ಹಾಗಾದರೆ ಬಹಳ ಜನ ಬಂದು ಹೋಗ್ತಾ ಇರುತಾರೇನು, ನಿಮ್ಮ ಮನೆಗೆ ಬಾಡಿಗೆಗೆ."

"ಹೂಂ. ಪೋಲೀಸ್ ಕಾನಿಸ್ಟೇಬಲ್ ಬೈಯಣ್ಣ ಇದ್ದ ಮೂರು ತಿಂಗಳು—ದಫೇದಾರಿ ಟೆರೇನಿಂಗಿಗೆ ಬಂದಿದ್ದ ; ದೊಡ್ಡಬಳ್ಳಾಪುರದವನು. ಅಪರೂಪ ಮನುಷ್ಯ. ಒಂದು ಕಾಸೂ ಬಾಡಿಗೆ ನಿಲ್ಲಿಸಲಿಲ್ಲ. ಅದರ ಹಿಂದೆ ಏಕಾಂತಪ್ಪ ಇದ್ದ, ಆರು ತಿಂಗಳು. ಕೆಲಸ ಹುಡುಕಿ ಹುಡುಕಿ ಹಣ್ಣಾಗಿ ಹೋದ. ಆದರೂ ಬಾಡಿಗೆ ಕೊಡೋದು ಒಂದು ತಿಂಗಳೂ ಬಿಡಲಿಲ್ಲ— ಈಚೀಚೆಗೆ ಶಿದ್ದವ್ವ ಇದ್ಲು ಸ್ವಲ್ಪ ದಿನ. ಬಿನ್ನಿಮಿಲ್ಲಿನಲ್ಲಿ ಕೆಲಸಮಾಡುತ್ತಿದ್ದಳು. ಲಗ್ನ ಆಯ್ತು ಅವಳಿಗೆ. ಚಿನ್ನದಂತ ಹುಡುಗಿ. ಕಡೇಮನೆ ಅಯ್ಯನವರೇ ಲಗ್ನಮಾಡಿಸಿದ್ದು."

"ನಾನು ಇರ್ತೀನೆ ಈ ಕೋಣೆಯಲ್ಲಿ. ಇಗೋ ಎರಡೂವರೆ ರೂಪಾಯಿ....ಅಜ್ಜೀ! ಇಲ್ಲಿಗೇನಾದರೂ ಒಬ್ಬ ಹುಡುಗಿ ಬಂದಿದ್ದಳೆ?—ಹದಿನೆಂಟು ವರ್ಷ—ನೋಡೋಕೆ ಚೆನ್ನಾಗಿದಾಳೆ—ಹೆಸರು ಚೆನ್ನಿ—ಗಲ್ಲದ ಮೇಲೆ ಕಾಸಿನಗಲ ನೀಲಿಮಚ್ಚೆ, ಕಳಕಳಿಸಿ ನಗುತ್ತಾ ಇರೋದು—"

"ಇಲ್ಲ. ಅಂಥ ಹುಡುಗೀನೇ ಕಾಣೆ ನಾನು. ಅದೂ ಅಲ್ಲದೆ ಇಲ್ಲಿ ಒಳ್ಳೇ ಜನಕ್ಕೆ ಮಾತ್ರ ನಾನು ಜಾಗ ಕೊಡೋದು. ಕೇಳಿದವರಿಗೆಲ್ಲಾ ಕೊಡೋದಿಲ್ಲ. ಶಿದ್ದವ್ವ ಇದ್ಲು; ಚಿನ್ನದಂಥ ಹುಡುಗಿ; ಲಗ್ನ ಆಗಿ ಹೋದಳು."

ಇಲ್ಲ, ಇಲ್ಲ, ಇಲ್ಲ! ಆರೇಳು ತಿಂಗಳಾಯಿತು; ಎಲ್ಲೆಲ್ಲಿ ಹುಡುಕಿದರೂ ಇಲ್ಲ, ಇಲ್ಲ, ಇಲ್ಲ! ಎಲ್ಲಾ ಜಾಗದಲ್ಲೂ ಹುಡುಕಿಯಾಯ್ತು. ತನ್ನ ಸ್ಥಿತಿಯ ಜನ ಇರಬಹುದಾದ ಕಡೆಯಲ್ಲೆಲ್ಲಾ ನೋಡಿಯಾಯ್ತು. ಎಲ್ಲಿ ಹೋದರೂ ಒಂದೇ ಉತ್ತರ—'ಇಲ್ಲ.' ಆದರೂ ಬೆಂಗಳೂರು ಬೆಂಗಳೂರು ಬೆಂಗಳೂರು ಎಂದು ಸದಾ ಜಪಿಸುತ್ತಿದ್ದ ಅವಳು ಈ ಬೆಂಗಳೂರಿನ ಕರಾಳ ಕಗ್ಗತ್ತಲೆಯ ಗವಿಯೊಂದರಲ್ಲೆಲ್ಲೋ ಹುದುಗಿ ಹೋಗಿದ್ದಾಳೆಂದೇ ಆತನ ನಂಬಿಕೆ. ಶೋಧಿಸಿಯೇ ಬಿಡಬೇಕೆಂಬ ಚಿತ್ತ ಬಲಿಯಿತೇ ಹೊರತು ಬಡವಾಗಲಿಲ್ಲ. ಆತನ ಜೀವನದಲ್ಲಿದ್ದುದು ಒಂದೇ ಸಾಧನೆ—ಆಕೆಯ ಶೋಧನೆ.

ಅಜ್ಜಿ ಹೋದಮೇಲೆ ಬಾಗಿಲನ್ನು ಮುಂದಕ್ಕೆ ಮಾಡಿ ಕೋಣೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ. ಕಸ ಹೊಡೆದು ಒಂದು ವಾರದ ಮೇಲಾಗಿತ್ತು. ಮೂಲೆಗಳಲ್ಲಿ ಜೇಡರ ಬಲೆ ಸಾಲುಗಟ್ಟಿದ್ದವು. ಬಾಗಿಲಹಿಂದೆ ಒಂದು ಹಳೆಯ ಚಾಪೆ ಸುತ್ತಿ ಇಟ್ಟಿತ್ತು. ಇನ್ನೊಂದು ಮೂಲೆಯಲ್ಲಿ ಅರ್ಧ ಶಿಥಿಲವಾಗಿದ್ದ ಕಸಬರಿಕೆ ಇತ್ತು. ಇವೆರಡು ಸಾಮಾನುಗಳನ್ನು ಮನೆ ಮಾಲೀಕಳು ಬಾಡಿಗೆದಾರರ ಉಪಯೋಗಕ್ಕೆಂದು ಉದಾರ ಮನಸ್ಸಿನಿಂದ ಕೊಟ್ಟಿದ್ದಳು.

ಆತ, ಚಾಪೆಯನ್ನು ಜರ್ರೆಂದು ಬಿಚ್ಚಿ ಗೋಡೆಯ ಪಕ್ಕಕ್ಕೆ ಹಾಸಿದ. ಒಂದಿಷ್ಟು ಧೂಳು ನೆಲದ ಮೇಲಿನಿಂದ ಮೇಲಕ್ಕೆ ಹಾರಿ, ಒಂದು ವಾರದ ತಮ್ಮ ಮೌನನಿದ್ರೆಯನ್ನು ಭಂಗಮಾಡಿದವರನ್ನು ನೋಡುವಂತೆ ಆತನ ಸುತ್ತ ಸುಳಿದಾಡಿದವು. ಚಾಪೆಯ ಮೇಲೆ ಕಂಡುಬಂದ ಒಂದೆರಡು ತಗಣೆಗಳು ಕೂಡಲೇ ಕಡ್ಡಿಗಳ ಸಂದುಗಳಲ್ಲಿ ಮಾಯವಾದವು.

ಆತ ಕಾಲು ಚಾಚಿಕೊಂಡು, ಗೋಡೆಗೆ ಒರಗಿಕೊಂಡು ಆ ಚಾಪೆಯ ಮೇಲೆ ಕುಳಿತುಕೊಂಡ. ಎದುರಿಗೆ ಒಂದು ಮಾಡ. ಅದರ ಬಾಗಿಲು ಒಂದು ಮುರಿದು ಹೋಗಿತ್ತು. ಅದನ್ನೇ ನೋಡುತ್ತಾ ಕುಳಿತ.

ಆ ಕೋಣೆಯಲ್ಲಿ ತನ್ನ ಹಾಗೆ ಇನ್ನೆಷ್ಟು ತರದ ಜನ ಬಂದಿರಲಿಲ್ಲ.... ಇದ್ದಿರಲಿಲ್ಲ....ಅನಂತರ ಬಂದ ಹಾದಿ ಹಿಡಿದು ಹೋಗಿರಲಿಲ್ಲ. ಆ ಕೋಣೆಯ ಹಿಂದಿನ ನಿವಾಸಿಗಳು ಬಿಟ್ಟು ಹೋಗಿರಬಹುದಾದ ಕುರುಹುಗಳ ಮೂಲಕ ಅವರ ಕ್ರಿಯೆಗಳನ್ನು ಚಿತ್ರಿಸಿಕೊಳ್ಳಲಾರಂಭಿಸಿದ.... ಗೋಡೆಗಳ ಮೇಲೆಲ್ಲಾ ಅಲ್ಲಲ್ಲಿ ಒರೆಸಿದ ಬೆರಳ ಗುರುತುಗಳು, ಸದಾ ನಶ್ಯ ಏಕ್ಕುತ್ತಾ ಸೀನುತ್ತಾ ಸಿಂಬಳದ ಬೆರಳುಗಳನ್ನು ಗೋಡೆಗೆ ಒರೆಸುತ್ತಾ, ಉದ್ಯೋಗದ ಬೇಟೆಯಾಡು ತ್ತಿದ್ದ ಏಕಾಂತಪ್ಪನನ್ನು ನೆನಪಿಗೆ ತರುತ್ತಿದ್ದವು. ಪಕ್ಕದ ಗೋಡೆಯಲ್ಲಿ ಸುಮಾರು ಆರು ಅಡಿ ಎತ್ತರದಲ್ಲಿ, ಗೋಡೆಯಲ್ಲಿಯೇ ಹೂತಿದ್ದ ಆ ಮುರು ಕಲು ಕನ್ನಡಿಯ ಮುಂದೆ ಕಾನ್‌ಸ್ಟೇಬಲ್ ಬೈಯಣ್ಣ ಎಷ್ಟು ಸಲ ನಿಂತು ಕೊಂಡು, ರುಮಾಲಿನ ಅಂಚನ್ನು ತಿದ್ದಿಕೊಳ್ಳುತ್ತಿರಲಿಲ್ಲ?

ಆ ಕೋಣೆಗೆ ಒಂದೂ ಕಿಟಕಿ ಇರಲಿಲ್ಲ. ಮೇಲಿನ ಒಂದೆರಡು ಹಂಚು ದಯೆಯಿಟ್ಟು ಮುರಿದುಹೋಗಿದ್ದುದರಿಂದ, ಆ ಕೋಣೆಗೆ ಸ್ವಲ್ಪ ಬೆಳಕು ಬರುತ್ತಿತ್ತು. ಅದೇ ಆ ಕೋಣೆಗೆ ಕಿಟಕಿ. ಗಾಳಿಯ ಅಲುಗಾಟಕ್ಕೂ ಆಸ್ಪದ ವಿರಲಿಲ್ಲ. ಗಾಳಿಯನ್ನೇ ಸೆರೆಹಾಕಿದ್ದಳು ಆ ಅಜ್ಜಿ, ಆ ಕೋಣೆಯಲ್ಲಿ. ಆ ಕೋಣೆಯ ತುಂಬ ಭಾರವಾದ ಅಹಿತವಾದ ಮುಗ್ಗುವಾಸನೆ ತುಂಬಿತ್ತು. ಹೊಸದಾಗಿ ಬಂದವರಿಗೆ ಮೊದಲು ಮೊದಲು ಅದು ಎದೆಯ ಮೇಲೆ ಭಾರ ಹೇರಿದ ಹಾಗೆ ಕಂಡುಬಂದು, ಅನಂತರ ಕ್ರಮವಾಗಿ ಅದು ಅಭ್ಯಾಸವಾಗಿ, ಪರಿಚಿತವಾಗಿ ಪ್ರಿಯವಾಗಿ, ಹೊರಗಿನ ಗಾಳಿಯೇ ಕಡೆಯಲ್ಲಿ ಅಸಾಧ್ಯವಾಗಿ ಬಿಡುತ್ತಿತ್ತು. ಆತ ಈ ಹೊಸ ವಾತಾವರಣವನ್ನು ಪರಿಚಯಮಾಡಿ ಕೊಳ್ಳುತ್ತಾ ಹಳಬನಾಗುತ್ತಿರುವಾಗ, ಜಂಪು ಬಂತೋ ಏನೋ—ಇದ್ದಕ್ಕಿದ್ದ ಹಾಗೆ ಆ ಭಾರವಾದ ಮುಗ್ಗಲು ಗಾಳಿಯಲ್ಲಿ ತೇಲಿಕೊಂಡು ಬಂದ ಕೆಂಡ ಸಂಪಿಗೆ ಹೂವಿನ ತೀವ್ರಗಂಧ ಆತನನ್ನು ಎಚ್ಚರಗೊಳಿಸಿತು—ಮೈ ಮುಟ್ಟಿ ತಟ್ಟಿ ಎಬ್ಬಿಸಿದಂತೆ. "ಓ ಚೆನ್ನಿ" ಎಂದು ಉತ್ತರಕೊಟ್ಟ— ಏನೋ ಒಂದು ಕರೆ ಕೇಳಿದವನಂತೆ. ತತ್‌ಕ್ಷಣ ತನ್ನ ಮಾತಿಗೆ ತಾನೇ ಚಕಿತನಾದ. ಆ ಗಂಧ

ಅವನನ್ನು ಎಡೆಬಿಡದೆ ಸುತ್ತಿಕೊಂಡು ತಬ್ಬಿಕೊಂಡತ್ತಿತ್ತು. ತಾನೂ ಅದನ್ನು ಮುಟ್ಟಲು, ಹಿಡಿಯಲು ತಬ್ಬಿಕೊಳ್ಳಲು ಎರಡು ಕೈಗಳನ್ನೂ ಚಾಚಿದ— ಅದು ಕೈಗೆ ಸಿಗಬಹುದೆಂಬ ಭ್ರಾಂತಿಯಿಂದ. ಕೆಂಡಸಂಪಿಗೆ ಹೂವಿನ ಗಂಧ ಅವನನ್ನು ಕರೆಯಿತೆ? ಯಾರೋ ಕೂಗಿದಂತೆ ಆಗಲಿಲ್ಲವೆ ಹೆಸರು ಹಿಡಿದು? ಆ ಗಂಧದ ಧ್ವನಿ. ಅವನನ್ನು ತಬ್ಬಿ ತಟ್ಟಿ ಎಚ್ಚರಿಸಲಿಲ್ಲವೆ?

"ಅವಳು ಖಂಡಿತ ಇಲ್ಲಿದ್ದಳು" ಎಂದು ತನಗೆ ತಾನೇ ಅರ್ಧ ಗಟ್ಟಿಯಾಗಿ ಹೇಳಿಕೊಂಡ. ಅನಂತರ ಥಂಗನೆ ಎದ್ದು ನಿಂತುಕೊಂಡ. ಕೆಂಡಸಂಪಿಗೆ ಅವಳು ಅತಿಶಯವಾಗಿ ಬಯಸುವ ಹೂ. ಏನಿಲ್ಲದಿದ್ದರೂ ಕೆಂಡಸಂಪಿಗೆ ಮುಡಿಯದೆ ಬಿಡಳು. ಹಳ್ಳಿಯ ಮುಂದಿನ ಕೆಂಡೆಸಂಪಿಗೆ ಗಿಡದ ಹೂಗಳೆಲ್ಲ ಅವಳ ಪಾಲೇ. ಅದೇ ಕೆಂಡಸಂಪಿಗೆ ಕಂಪು! ಖಂಡಿತ ಅವಳಿದ್ದಳು ಇಲ್ಲಿ. ಹಾಗಿದ್ದರೆ ಅವಳ ನೆಲೆಯ ಹತ್ತಿರ ಬಂದಹಾಗೆ. ಇಷ್ಟರಲ್ಲೇ ಸಿಗುತ್ತಾಳೆ. ಆ ಕಂಪು—ಕೆಂಡಸಂಪಿಗೆ ಹೂವಿನ ಆ ಕಂಪು—ಎಲ್ಲಿಂದ ಬಂತು?

ಪುನಃ ಆ ಕೋಣೆಯನ್ನು ಸೂಕ್ಷ್ಮವಾಗಿ ಗಮನಿಸತೊಡಗಿದ. ಎದುರು ಮಾಡದ ಬಾಗಿಲ ಮೇಲೆ ಜೋತುಬಿದ್ದಿದ್ದ ಆ ನೂಲಿನ ಹಗ್ಗವನ್ನು ತಂದವರು, ಅಲ್ಲಿಗೆ ಬರುವಾಗ ತಮ್ಮ ಆಸ್ತಿ ಎನಿಸಿದ್ದ ಹಾಸಿಗೆಯಾದರೂ ಒಂದು ಇದ್ದು, ಹೋಗುವಾಗ ಅದೂ ಇಲ್ಲದೆ, ಹಗ್ಗವನ್ನು ಬಿಟ್ಟುಹೋಗಿರಬೇಕು. ಆ ಮಾಡದ ಒಂದು ಮೂಲೆಯಲ್ಲಿ ಕೊಳಕು ಬಾಚಣಿಗೆಯೊಂದು ಬಿದ್ದಿತ್ತು. ಅದರ ಮುರುಕು ಹಲ್ಲುಗಳಿಗೆ ನಾಲ್ಕಾರು ಹರಕುಕೂದಲು ಸುತ್ತಿಕೊಂಡಿದ್ದವು. ಮಾಡದ ಮೇಲೆ ಎರಡು ಮೊಳೆಗಳನ್ನು ಹೊಡೆದು ಅವುಗಳ ಮೇಲೆ ಒಂದು ಚಾಕಾಯಿಹಲಿಗೆ ಇಟ್ಟಿತ್ತು. ಅದರ ಮೇಲೆ ಒಂದುಕಡೆ ಧೂಳು ಮುಚ್ಚಿದ್ದ ವ್ಯಾಸಿಲೀನ್ ಡಬ್ಬಿ ಇತ್ತು. ಇನ್ನೊಂದು ಕಡೆ ಒಂದು ಹಳೇ ಬಟ್ಟೆಯ ತುಂಡು ಇತ್ತು. ಆ ಬಟ್ಟೆಯ ತುಂಡನ್ನು ತೆಗೆದುಕೊಂಡು ಮೂಸಿನೋಡಿದ. ಒಳ್ಳೆಣ್ಣೆಯ ಗಮಟು ವಾಸನೆ ಬರುತ್ತಿತ್ತು ಅರಿವೆಯಿಂದ! ವಾಕರಿಕೆ ಬಂದಂತಾಗಿ ಆ ಅರಿವೆಯನ್ನು ನೆಲದ ಮೇಲೆ ಬಿಸಾಟಿದ. ಊಹು....ಅವಳು ಅಲ್ಲಿದ್ದ ಕುರುಹು ಏನೊಂದೂ ಕಾಣಿಸಲಿಲ್ಲ. ಆ ಬಾಚಣಿಗೆ ಇಂಥವರದೆಂದೇ ಹೇಳುವಂತಿರಲಿಲ್ಲ; ಯಾರದಾದರೂ ಆಗಿರಬಹುದು. ದಾರಿ ತಪ್ಪಿದ ನಾಯಿ ನೆಲೆಯನ್ನು ಹುಡುಕುವಂತೆ ಅವನು ಆ ಕೋಣೆಯಲ್ಲಿ ಅವಳ ನೆಲೆಯ ಕುರುಹಿಗಾಗಿ ಸುತ್ತಾಡಿಬಿಟ್ಟ. ಮೂಲೆ, ಬಿರುಕು, ಬಾಗಿಲ ಹಿಂದೆ, ಕಸಕಡ್ಡಿ ಯಾವುದನ್ನೂ ಬಿಡಲಿಲ್ಲ.

ಅನಂತರ ಕೈಗಳನ್ನು ಬೆನ್ನ ಹಿಂದೆ ಕಟ್ಟಿಕೊಂಡು ಆ ಕೋಣೆಯಲ್ಲಿ ಸುತ್ತಲಾರಂಭಿಸಿದ. ಆಕೆ ಆ ಕೊಠಡಿಯಲ್ಲಿ, ಅಲ್ಲಿ, ತನ್ನಲ್ಲಿ, ತನ್ನ ಮೇಲೆ, ತನ್ನ ಸುತ್ತ, ತನ್ನನ್ನು ತಬ್ಬಿಕೊಂಡು, ತನ್ನಲ್ಲಿ ಲೀನವಾಗಿ, ಇರುವಂತೆ ಆತನಿಗೆ ಭಾಸವಾಯ್ತು. ಯಾವುದು ಮೊದಲು ಸೂಕ್ಷ್ಮೇಂದ್ರಿಯಕ್ಕೆ ಮಾತ್ರ ಗೋಚರವಾಯ್ತೋ ಅದು ಬಾಹ್ಯೇಂದ್ರಿಯಗಳಿಗೂ ತಿಳಿಯಬರುತ್ತಿದ್ದಂತೆ ಅನಿಸಿತು ಅವನಿಗೆ. "ಓ ಚೆನ್ನಿ" ಎಂದು ಓಗೊಟ್ಟ—ಪುನಃ ಸುಳಿದುಬಂದ ಕೆಂಡಸಂಪಿಗೆ ಹೂವಿನ ಗಂಧದ ಕರೆಗೆ. ಮತ್ತೆ ಬೆಚ್ಚಿದ ತನ್ನ ಧ್ವನಿಗೆ. ಎಲ್ಲಿಂದ ಬಂತು ಕೆಂಡಸಂಪಿಗೆ ಹೂವಿನ ಆ ಕಂಪು ! ಮತ್ತೆಲ್ಲಿಂದ ಬಂತು ಆ ಕಂಪಿಗೆ ಧ್ವನಿಶಕ್ತಿ !!

ತಲೆಯೆತ್ತಿ ನೋಡಿದ. ಮೇಲೆ ಛಾವಣಿಯ ಮಧ್ಯದಲ್ಲಿ ಒಂದು ಸೂರು ಅಡ್ಡ ಹೋಗಿತ್ತು. ಅಷ್ಟೆ. ಬಾಗಿಲ ಹಿಂದಲ ಕಂಬ ಅರ್ಧಗೋಡೆಯ ಒಳಗೆ ಹುದುಗಿಹೋಗಿ ಅದರ ಕಿವಿ ಗೋಡೆಯ ಹೊರಗೆ ಚಾಚಿ ಖಂದಿತ್ತು. ಕೂಡಲೇ ಅಲ್ಲಿ ಕೈಹಾಕಿದ. ಅರ್ಧ ಸೇದಿಟ್ಟಿದ್ದ ಬೀಡಿಯೊಂದು ಸಿಕ್ಕಿತು. ಜಿಗುಪ್ಸೆಯಿಂದ ಅದನ್ನು ಮೂಲೆಗೆ ಬಿಸಾಡಿ ಕೈಧೂಳನ್ನು ಜಾಡಿಸಿಕೊಂಡ. ಆಕೆ ಅಲ್ಲಿದ್ದಳೆಂದು ಅವನಿಗೆ ಭಾಸವಾಗುತ್ತಿತ್ತು. ಆದರೆ ನೆಲೆ ಸಿಕ್ಕಲಿಲ್ಲ; ಕುರುಹು ಕಾಣಲಿಲ್ಲ.

ಅಜ್ಜಿಯ ನೆನಪಾಯ್ತು. ಬಾಗಿಲು ತೆಗೆದು ಓಡಿದ ಆಕೆಯ ಬಳಿಗೆ. ಹೊರಗಡೆ ಜಗಲಿಯ ಮೇಲೆ ಕುಳಿತುಕೊಂಡು ಹೊಗೆಸೊಪ್ಪು ತಿಕ್ಕುತ್ತಿದ್ದಳು ಅಜ್ಜಿ. ಸಾಧ್ಯವಾದಷ್ಟು ಶಾಂತತೆಯ ಸೋಗು ಹಾಕಿ "ಆ ಅಜ್ಜಿ, ಆ ಕೋಣೆಯಲ್ಲಿ ನನಗೂ ಮುಂಚೆ ಯಾರಿದ್ದರು" ಎಂದು ಕೇಳಿದ.

"ಯಾಕಣ್ಣಾ, ಹೇಳಿದೆನಲ್ಲಾ ಆಗ್ಲೆ—ಶಿದ್ದವ್ವ ಇದ್ದದ್ದು. ಅಪರಂಜಿ ಹುಡುಗಿ—ಲಗ್ನಮಾಡಿಕೊಂಡವ್ಳೆ, ಈಗ; ಕಡೇಮನೇ ಅಯ್ಯನವರೇ ಲಗ್ನ ಮಾಡಿಸಿದ್ದು. ಒಂದು ಕಾಸು ಬಾಡಿಗೇನೂ ಬಾಕಿ ಇರಲಿಲ್ಲ. ನಾನು ಅಂಥಾ ಇಂಥಾ ಜನಕ್ಕೆ ಬಾಡಿಗೆ ಕೊಡೋದೇ ಇಲ್ಲ."

"ಆ ಶಿದ್ದವ್ವ—ಶಿದ್ದವ್ವ—ಹೇಗಿದ್ದಳು, ನೋಡಲಿಕ್ಕೆ ?"

"ಕರ್‍ರಗೆ, ಗಿಡ್ಡಕ್ಕೆ ಇದ್ದಳು—ಆದರೂ ಒಳ್ಳೇ ಹುಡುಗಿ."

"ಅದಕ್ಕೆ ಹಿಂದೆ ಯಾರಿದ್ದರು?"

"ಕಾನಿಸ್ಟೇಬಲ್ ಬೈಯಣ್ಣ—ದಫೇದಾರಿ ಟಿರೇನಿಂಗಿಗೆ — "

ಆತ ಹತಾಶನಾಗಿ ಹಿಂದಿರುಗಿದ. ನಿಧಾನವಾಗಿ ಕೋಣೆಗೆ ಬಂದ. ಜಿಗುಪ್ಸೆ ಜಿಗಣಿಯ ಹಾಗೆ ಅಂಟಿತ್ತು ಅವನನ್ನು. ಕೊಠಡಿಗೆ ಹೋಗಿ ಬಾಗಿಲನ್ನು ಹಾಕಿ ಭದ್ರವಾಗಿ ಚಿಲಕ ಹಾಕಿಬಿಟ್ಟ. ಅನಂತರ ಮಾಡದ ಬಾಗಿಲ ಮೇಲೆ ಜೋತುಬಿದ್ದಿದ್ದ ನೂಲಿನ ಹಗ್ಗವನ್ನು ತೆಗೆದುಕೊಂಡು ಒಂದು ತುದಿಯನ್ನು ಮೇಲಿನ ಅಡ್ಡಸೂರಿಗೆ ಕಟ್ಟಿ, ಜಗ್ಗಿನೋಡಿ ಸಮಾಧಾನಹೊಂದಿದ. ಇನ್ನೊಂದು ತುದಿಗೆ ಸರಿಗಂಟು ಹಾಕಿ, ಬಾಗಿಲನ್ನೊಮ್ಮೆ ನೋಡಿದ.

* * * *

ಅರ್ಧ ಗಂಟೆ ಆಗಿರಬಹುದು. ಹೊರಗಡೆ, ಅಜ್ಜಿ ಎಲೆ ಅಡಿಕೆ ಹೊಗೆಸೊಪ್ಪು ಹಾಕಿಕೊಂಡು ಮಾಮೂಲಿನಂತೆ ಎದುರು ಓಬಕ್ಕನ ಮನೆಗೆ ಹೋದಳು—ಮಜ್ಜಿಗೆ ತರುವುದಕ್ಕೆ.

"ಯಾರೋ ಬಾಡಿಗೆ ಗಿರಾಕಿ ಬಂದ ಹಾಗಿತ್ತು" ಎಂದಳು ಓಬಕ್ಕ.

"ಹೌದವ್ವ ಬಂದವ್ನೆ. ಎರಡೂವರೆ ರೂಪಾಯಿ ಆಗಲೇ ಕೊಟ್ಟವ್ನೆ. ಒಳಗೆ ಮಲಗ್ಯವ್ನೆ. ನಿದ್ದೆಮಾಡ್ತಾ ಇರಬೇಕು ಆಗ್ಲೆ."

ಓಬಕ್ಕ ಧ್ವನಿ ತಗ್ಗಿಸಿ "ಹೇಳ್ದೇನವ್ವಾ ಆ ಸಮಾಚಾರಾನ, ಅವನಿಗೆ" ಎಂದುಸುರಿದಳು.

ಅಜ್ಜಿ ತಲೆ ಅಲ್ಲಾಡಿಸಿದಳು. "ಎಲ್ಲಾದ್ರೂ ಉಂಟೇ—ಆ ಕೋಣೇಲಿ ಏನು ನಡೀತು ಅಂತ ಹೇಳ್ತಾರೆ."

"ನಿಜ ಕಣವ್ವ. ಆ ಹುಡುಗಿ ಆ ಕೋಣೇಲಿ ನೇಣು ಹಾಕಿಕೊಂಡು ಸತ್ತು ಎಂಟು ದಿನ ಕೂಡ ಆಗಿಲ್ಲ ಅಂತ ಆತನಿಗೆ ತಿಳಿದರೆ, ಕಂಬಿ ಕಿತ್ತ್ಯಾನು."

"ಅದಕ್ಕೇ ಹೇಳಲಿಲ್ಲವ್ವ. ಆ ಹಗ್ಗ ಇನ್ನೂ ಆ ಕೋಣೆ ಒಳಗೇ ಇದೆ. ಆದ್ರೂ ಪಾಪ, ಆ ಹುಡುಗಿ ನೇಣು ಹಾಕಿಕೊಂಡು ಸತ್ರೂ, ಅವಳ ಗಲ್ಲದ ತುದಿಯ ಮೇಲಿನ ಕಾಸಿನಗಲದ ನೀಲಿಮಚ್ಚೆ ಕಳಕಳಿಸಿ ನಗುತ್ತಾ ಇತ್ತು—'ಮಜ್ಜಿಗೆ ಕೊಡವ್ವ, ಹೊತ್ತಾಯ್ತು ಹೋಗ್ಬೇಕು.'"

——::——

---

The furnished room.

# ಸೂರ್ಯಕಾಂತಿ ಹೂ

ನಿಮೋನಿಯಾ ಮಹಾರಾಯನಿಗೆ ಹೆಣ್ಣು ಎಂತ ದಣಿ ಮಿ ! ಮಠದ ಸ್ವಾಮಿಗಳು ಪ್ರವಾಸಮಾಡಿದಂತೆಲ್ಲಾ ಅವರ ಹಿಂದೇ ತಮ್ಮ ಸಂಸಾರಾನೆಲ್ಲಾ ಸಾಗಸ್ತಾ, ಜರುಗಿಸ್ತಾ, ಇರ್ತಾರಲ್ಲ, ಉಂಡಾಡಿಭಟ್ಟ ಜಟ್ಟಿಗಳು ; ಅವರಲ್ಲಿ ಯಾರ ಮೇಲಾದರೂ ತನ್ನ ಪರಾಕ್ರಮ ತೋರಿಸಬಾರದೇ ನಿಮೋನಿಯಾ ಜಾಡ್ಯಪ್ಪ. ಊಹುಂ. ಪಾಪ ! ಬಳ್ಳಿ ಹಾಗೆ ಬಳಕುತಾ ಬೆಳ್ಳಿ ಹಾಗೆ ಚೊಕ್ಕಾಗಿರುವ ಸೀತಮ್ಮನ ಮೇಲೇ ಅವನ ಪ್ರತಾಪ. ಸರಿ ; ಸೀತಮ್ಮನ ಗಂಡ ರಘು ಕಡೆಯಿಂದ ಡಾಕ್ಟರಿಗೆ ಬಂತು ಬುಲಾವ್.

ಒಂದಾಯ್ತು, ನಾಲ್ಕಾಯ್ತು, ಹತ್ತಾಯ್ತು, ಇಪ್ಪತ್ತಾಯ್ತು ದಿನ. ದಿನ ಸವೆದಂತೆ ಸೀತಮ್ಮನೂ ಸವೆದು ಸಿಕ್ಕಟ್ಟಿಗೆ ಆದಳು. ಜ್ವರದ ತಾಪ ಇಳೀಲಿಲ್ಲ. ಒಂದು ದಿನ ಡಾಕ್ಟರು ಬೆಳಿಗ್ಗೆ ಮಾಮೂಲಿನಂತೆ ಬಂದು ಸೀತಮ್ಮನ್ನ ಪರೀಕ್ಷೆ ಮಾಡಿ, ಥರ್ಮಾಮಿಟರನ್ನ ಕಿಟಕಿಗೆ ಅಡ್ಡ ಹಿಡಿದು ನೋಡುತ್ತಿದ್ದಾಗ, ಅವರ ಹಿಂದೇನೆ ರಘು ಬಗ್ಗಿ ನೋಡಿದ. ನೂರಾನಾಲ್ಕರ ಮೇಲಿತ್ತು.

ಡಾಕ್ಟರರ ಮುಖ ಗಂಭೀರವಾಗಿತ್ತು. ರಘೂನ್ನ ಹೊರಗಡೆ ವರಾಂಡಾದ ವರೆಗೂ ಕರೆದುಕೊಂಡು ಬಂದು, ವಯೋಭಾರದಿಂದ ಕಣ್ಣುಗಳ ಮೇಲೆ ಬಾಗಿ ಬಿದ್ದಿದ್ದ ಬೆಳ್ಳಿ ಹುಬ್ಬನ್ನು ಸ್ವಲ್ಪ ಮೇಲೆತ್ತಿ " ರಘು, ನಿರಾಶೆ ಅಂತ ಹೇಳೋದಿಲ್ಲ. ಆದರೂ ಆಶೆ ಅನ್ನೋದು ಆಕಾಶಕ್ಕೆ ಹಾರ್ತಾ ಇದೆ. ಈ ಜ್ವರ, ಈ ಕೆಮ್ಮು ಇದಕ್ಕಲ್ಲ, ನಾನು ಹೆದರೋದು. ನಾಡಿ ಚೆನ್ನಾಗಿದೆ. ಎದೆ ಕೆಟ್ಟಿಲ್ಲ. ಆದರೆ, ಆಕೆಯ ದೇಹಾಲಸ್ಯಕ್ಕಿಂತ ಆಕೆಯ ಮನಸ್ಸಿನ ಸ್ಥಿತಿಯೆ ನನ್ನ ಬೆದರಿಸುತ್ತಿರೋದು. ನಿನ್ನ ಹೆಂಡತಿಗೆ ಏನಾದರೂ ಮನೋರೋಗ ಇದೆಯೇ ? "

" ಇಲ್ಲ. ಏನೂ ಇಲ್ಲ ಮಕ್ಕಳಾಗಲಿಲ್ಲಾ–ಅಂತ–" " ಸರಿ ಬಿಡು. ಅದು ಇದ್ದೇ ಇರುತ್ತೆ ಹಡೀದೇ ಇದ್ದ ಹೆಂಗಸರಿಗೆಲ್ಲಾ. ಹಾಗಿದ್ದರೆ ನಿಶ್ಶಕ್ತಿ ಅಂತೀನಿ. ಅಂತು ನೋಡು, ಡಾಕ್ಟರನ್ನೇ ರೋಗಿ ದಿನ ವಾರ ನಕ್ಷತ್ರ ತಿಥಿ ಹೇಗಿದೆ ಅಂತ ಕೇಳಿದರೆ ಕೊಡೋ ಔಷಧಿಯಲ್ಲಿ ಹನ್ನೆರಡಾಣೆ ಗುಣ ಇಂಗಿ ಹೋಗುತ್ತೆ. ಜ್ವರ ವಾಸಿ ಆಗುತ್ತೇ ಅನ್ನುವ ಧೈರ್ಯ ಡಾಕ್ಟರರಿಗಿಂತ ಹೆಚ್ಚಾಗಿ ರೋಗಿಗೆ ಇರಬೇಕು. ಇಲ್ಲದಿದ್ದರೆ ಕಷ್ಟ. ಏನೋ ಈ ರೋಗ ದಲ್ಲಿ ಉಳಿಯೋದಿಲ್ಲ ಅಂತ ಅನುಮಾನ ಬಂದುಬಿಟ್ಟಿದೆ ನಿನ್ನ ಹೆಂಡತಿಗೆ.''

" ಏನು ಮಾಡಬೇಕು ಮತ್ತೆ ?"

'' ಆಕೆಗೆ ಸಂತೋಷವಾಗುವ ಹಾಗೆ ಮಾತನಾಡುತ್ತಿರಬೇಕು. ಆಕೆಗೆ ಇಷ್ಟವಾದ ವಿಚಾರವನ್ನೇ ಪ್ರಸ್ತಾಪಿಸಬೇಕು. ಜೀವನದಲ್ಲಿ ಆಸಕ್ತಿ ಹುಟ್ಟುವ ಹಾಗೆ ಮಾಡಬೇಕು. ಬ್ರಿಡ್ಜು ಬಳೆ–ರೈಲುಡಾಬು–ಹೀಗೆ ಏನಾದರೂ ಹೊಸ ಸಮೂನೆ ಆಭರಣದ ಮಾತು, ಹೀಗೆಲ್ಲಾ ಇರುತ್ತಲ್ಲಾ."

ಡಾಕ್ಟರು ಹೋದ ಮೇಲೆ ರಘು ರೋಗಿಯ ಕೋಣೆಗೆ ಕೂಡಲೇ ಹೋಗುವುದಕ್ಕೆ ಧೈರ್ಯ ಸಾಲದವನಾಗಿ, ಬೇರೆ ಕೊಠಡಿಗೆ ಹೋಗಿ ಹಾಸಿಗೆಯ ಮೇಲೆ ಹೊರಳಾಡಿದ. ತಲೆದಿಂಬು ತೋಯ್ದು ತೊಪ್ಪೆಯಾಯ್ತು. ಆಮೇಲೆ ಸಮಾಧಾನ ಮಾಡಿಕೊಂಡು ಬಚ್ಚಲಮನೆಗೆ ಹೋಗಿ ಮುಖವನ್ನು ತಣ್ಣೀರಲ್ಲಿ ತೊಳೆದುಕೊಂಡು, ಸೀತಾ ಮಲಗಿದ್ದ ಕೋಣೆಗೆ ಬಂದ. ಅಷ್ಟರಲ್ಲಿ ಕೋಣೆಯೊಳಗಿಂದ ಓಬಜ್ಜಿ ಹೊರಗೆ ಬಂದಳು.

ಓಬಜ್ಜೀನೆ? ... ಆ ಮನೆ ಕೆಲಸಗಿತ್ತಿ, ಕಾವಲುಗಾತಿ, ರಕ್ಷೆ, ಅಧಿದೇವತೆ, ಅಜ್ಜಿ. ಎಳೆಯ ವಯಸ್ಸಿನಿಂದ ಇಲ್ಲಿಯವರೆಗೂ ಆ ಮನೆಯ ಮೂರು ತಲೆಮಾರಿನವರ ಸೇವೆ ಮಾಡಿ ಹಣ್ಣಾಗಿದ್ದ ಮುದುಕಿ. ರಘೂನ್ನ ಎತ್ತಿ ಆಡಿಸಿದ ಅಜ್ಜಿ. ಆ ಊರಿನಲ್ಲಿ ರಘು ಕೆಲವರಿಗೆ '' ಸಾರ್ ", ಕೆಲವರಿಗೆ '' ರಘುನಾಥರಾಯರು." ಕೆಲವರಿಗೆ ವಕೀಲರು, ಕೆಲವರಿಗೆ ಯಜಮಾನರು ಆದರೆ ಓಬಜ್ಜಿಗೆ 'ರಘಪ್ಪ.' ಆ ಮನೆ ಓಬಜ್ಜಿಗೆ ತನ್ನ ಮನೆಗಿಂತ ಸ್ವಂತ ಮನೆ. ಮಕ್ಕಳಿಲ್ಲ–ಗಂಡನಿಲ್ಲ ; ರಘೂನ ಮೇಲೆ ಪುತ್ರವಾತ್ಸಲ್ಯ. "ಸೀತಮ್ಮನಿಗೆ ಜಂಪು ಹತ್ತಿದೆ. ನಾನು ವಸಿ ಮನೆ ತಾವ ಹೋಗಿ ಬತ್ತೀನಿ. ಇವತ್ತು ಸಂಜೆ ದೀಪ ಮುಟ್ಟಿಸಿದ ವ್ಯಾಕೇ ಬರೋದು " ಎಂದಳು.

“ಅದ್ಯಾಕೆ ಅಷ್ಟು ಹೊತ್ತು ಓಬಜ್ಜಿ.”

“ಏನು ಹೊತ್ತು. ನಮ್ಮ ಪಕ್ಕದ ಮನೆ ತಿಮ್ಮಪ್ಪನ ಮಗಳು ಗೌರೀದ್ದು ಸೋಬಾನ ನಾಡಿದ್ದು. ಹಸೆ ಜಗಲಿ ಮೇಲೆ ಒಸಿ ಚಿತ್ತಾರ ಬರೀಬೇಕಂತೆ. ಒಂದೆರಡು ಚಿತ್ತಾರ ಹಾಗೆ ಬರೆದು ಬರ್ತೀನಿ, ಮಧ್ಯಾಹ್ನ ಬಹಳ ಬೇಡವ್ರೆ.”

ರಘು ನಸುನಕ್ಕು “ಏನಜ್ಜಿ, ಹುಡುಗ ಹುಡುಗೀಗೆ ದೃಷ್ಟಿ ತಾಕೀತು ಅಂತ ನಿನ್ನ ಕೈಲಿ ಚಿತ್ರ ಬರೆಸುತ್ತಾರೇನು?” ಎಂದ. ಓಬಜ್ಜಿಯನ್ನ ಕಂಡರೆ ರಘೂಗೆ ಸಲಿಗೆಯ ವಿನೋದ.

“ಏ, ನಿಂಗೆ ತಮಾಷೆ ನನ್ನ ಕೂಡ. ಬಿಡು ಬಿಡು; ಒಂದಲ್ಲ ಒಂದಿನ ನಿನಗೂ ಒಸಿ ಬರೆದು ತೋರಿಸ್ತೀನಿ, ಒಂದು ದಿವಿನಾದ ಚಿತ್ತಾರ. ಮೂಗಿನ ಮೇಲೆ ಬೆರಳು ಮಡಗಬೇಕು.” ಎಂದು ಹೇಳುತ್ತಾ ಓಬಜ್ಜಿ ಹೊರಟಳು.

ರಘು ಸೀತಾನ ಕೊಠಡಿಯೊಳಗೆ ಮೆಲ್ಲಗೆ ಬಂದ. ಹೊದಿಕೆಯ ಅಲುಗಾಟದ ಅಲೆಯು ಇನಿತೂ ಇಲ್ಲದಂತೆ ಹಾಸಿಗೆಯಲ್ಲಿ ಮಲಗಿದ್ದಳು ಸೀತಾ—ರೋಗದ ನಿದ್ದೆ ಮಾಡುತ್ತಾ. ರಘು ಅವಳ ಮುಖವನ್ನು ಕ್ಷಣಕಾಲ ಈಕ್ಷಿಸಿ ಅನಂತರ ಪಕ್ಕದಲ್ಲಿದ್ದ ವಿರಾಮ ಕುರ್ಚಿಯಲ್ಲಿ ಒಂದು ಪುಸ್ತಕವನ್ನೋದುತ್ತಾ ಕುಳಿತ.

ಹಾಗೇ ಓದುತ್ತಾ ಇರುವಾಗ ರಘೂಗೆ ಸೀತಾ ಮಲಗಿದ್ದ ಮಂಚದ ಕಡೆಯಿಂದ ಗುಣು ಗುಣು ಸಣ್ಣ ದನಿ ಮೇಲೆ ಮೇಲೆ ಕೇಳಿ ಬಂದು, ಅವನು ಪುಸ್ತಕವನ್ನು ಬದಿಗಿಟ್ಟು ಮಂಚದ ಹಿಂದೆ ಬಂದು ನೋಡಿದ.

ಬಡಕಲ ಬಿದಿರು ಕೈಯನ್ನು ಪ್ರಯಾಸದಿಂದೆತ್ತಿ, ಎದುರು ಕಿಟಕಿಯ ಕಡೆ ಬೆರಳಿನಿಂದ ಏನನ್ನೋ ಮತ್ತೆ ಮತ್ತೆ ಎಣಿಸುತ್ತಿದ್ದಳು. ಸೀತಾ “ಒಂದು....ಎರಡು....” ಅನಂತರ “....ಮೂರು....ನಾಲ್ಕು” ಅನಂತರ “ಐದು ....ಆರು”....ಸ್ವಲ್ಪ ಕಾಲ ವಿರಾಮ. ಪುನಃ “ಒಂದು....ಎರಡು.”

ರಘು ಕಿಟಕಿಯ ಕಡೆ ನೋಡಿದ. ಎಣಿಸುವುದಾದರೂ ಏನನ್ನು? ಎದುರಿಗೆ ಕಿಟಕಿಯ ಹೊರಗಡೆ, ಪೌಳಿ ಗೋಡೆಯ ಮಗ್ಗುಲಿಗೆ, ಗೋಡೆಗೆ ಒತ್ತಿಕೊಂಡು ಅದರ ಎತ್ತರಕ್ಕೂ ಬೆಳೆದ ಸೂರ್ಯಕಾಂತಿ ಗಿಡವೊಂದಿತ್ತು. ಎಲೆ ಬಾಡಿದ್ದವು. ತುದಿಯಲ್ಲಿ ಹೂವೊಂದು ಅರಳಿತ್ತು. ಅಲ್ಲಿ ಎಣಿಕೆಗೆ ಏನಿದೆ?

ಕಿಟಕಿಗೆ ನಾಲ್ಕೇ ಕಂಬಿ ಇದ್ದದ್ದು. ಅರರತನಕ ಎಣಿಕೆ ಬರುವ ಹಾಗಿರಲಿಲ್ಲ. "ಏನು ಸೀತಾ ಎಣಿಸುತ್ತಿರೋದು ?''

''ಆರೇ.... ಆರೇ.... ಉಳಿದಿರೋದು.... ಈಗ ಬೇಗ ಬೇಗ....ಬೀಳಾ ಇದೆ....ಮೊನ್ನೆ ಇಪ್ಪ.... ತ್ತೆರಡಿತ್ತು........ಎಣಿಸ್ತಾ ಇದ್ರೆ ತಲೆ.... ದಿಮ್ ಅಂತಿತ್ತು....ಆಗೋ ! ಒಂದು ಬಿತ್ತು....ಐದೇ....ಐದೇ ಉಳೀತು." ಸೀತಾ ನಟ್ಟ ದೃಷ್ಟಿಯಿಂದ ಕಿಟಕಿಯ ಕಡೆ ನೋಡುತ್ತಿದ್ದಳು.

"ಏನು ಸೀತಾ ಅದು, ಐದೇ ಉಳಿದಿರೋದು ?''

"ಎಲೆ.... ಸೂರ್ಯಕಾಂತಿ.... ಗಿಡದ್ದು. ಕಾಯಿಲೆ ಬಿದ್ದಾಗಿಂದ.... ಷುರು .... ಎಲೆ ಉದುರ್ರೋಕೆ .... ಒಂದೊಂದೇ ಎಲೆ .... ಉದುರುತಾ ಇದೆ. ನನಗ್ಗೊತ್ತು....ಅದರ ಅರ್ಥ .... ಎಲ್ಲಾ ಎಲೆ ಉದುರಿದ ಮೇಲೆ.... ಆ ಹೂ ....ಆ ಹೂವೂ ಉದುರುತ್ತೆ....ಆಗ....ಆಗ...." ನಿಟ್ಟುಸಿರು.

"ಇದೇನು ಸೀತಾ, ಹೀಗೆ ಹುಚ್ಚುಹುಚ್ಚು ಮಾತಾಡ್ತೀ."

" ....ಆಗ....ಆಗ....ನಾನು....ನಾನೂ ಉದುರಿ....ಹೋಗ್ತೀನೆ."

ಸೀತೆ ಹನಿಗಣ್ಣುಗಳಿಂದ ಎದುರಿನ ಗಿಡವನ್ನೇ ನೋಡುತ್ತಿದ್ದಳು, ಆ ಗಿಡದಲ್ಲಿ ತನ್ನ ಜೀವವಿದೆಯೋ ಎಂಬಂತೆ. ರಘು ಅವಳೆದುರಿಗೆ ಬಂದು, ಹಾಸಿಗೆಯ ಮೇಲೆ ಕಿಟಕಿಗೆ ಅಡ್ಡ ಕುಳಿತು, ಅವಳ ಕೂದಲು ನೇವರಿಸುತ್ತಾ ಹುಸಿನಗೆ ನಕ್ಕು "ಏನು ಹುಚ್ಚು ಹುಡುಗಿಯ ಹಾಗೆ ಹರಟೆ ಹೊಡಿತೀದ್ದೀ ಸೀತಾ. ಓಬ್ಬಜ್ಜಿ ಕೇಳಿದರೆ, ನನ್ನನ್ನು ಸುಮ್ಮನೆ ಬಿಡೋದಿಲ್ಲ. ಸೂರ್ಯ ಕಾಂತಿ ಗಿಡಕ್ಕೂ ನಿನಗೂ ಏನು ಸಂಬಂಧ ? ಇಷ್ಟಕ್ಕೂ, ಹಾಗೆ ನೋಡಿದರೆ ನೀನೇ ನೀರೆರೆದು ಬೆಳೆಸಿದ ಗಿಡ ಅಲ್ಲವೆ ಅದು. ನೀನು ಕಾಯಿಲೆ ಬಿದ್ದಿ ; ನೀರು ಹಾಕುವವರು ಯಾರೂ ಇಲ್ಲ. ವಿಪರೀತ ಹಿಮ ಬೇರೆ. ಅದಕ್ಕೆ ಎಲೆ ಉದುರುತ್ತಾ ಇದೆ. ಅಷ್ಟೆ. ಇಷ್ಟಕ್ಕೆ ಹೆದರಿಕೊಳ್ಳುತ್ತಾರೆಯೆ ? ಈಗ ತಾನೆ ಡಾಕ್ಟರು ಹೇಳಿಹೋದರು, ಹತ್ತರಲ್ಲಿ ಒಂಭತ್ತು ಭಾಗ ವಾಸಿ ಆಗಿಹೋಯ್ತು ಅಂತ. ಇನ್ನೊಂದು ವಾರದಲ್ಲಿ ಮೊದಲಿನ ಹಾಗೆ ಓಡಾಡಿಕೊಂಡಿರುತ್ತೀ. ಪೂರ್ತಿ ವಾಸಿ ಆಗ್ಲಿ ; ಒಂದು ಹೊಸ ಚೈನ್ ಮಾಡಿಸಿ ಕೊಡ್ತೀನಿ ....ಏರೋ

ಪ್ಲೇನ್ ನಮೂನೇದು. ಈಗ ಹಾಗೇ ನಿದ್ದೆ ಮಾಡ್ತೀಯಾ, ನಾನು ಹೋಗಿ ಬೇಗ ಗಂಜಿಮಾಡಿಕೊಂಡು ಬರ್ತೀನೆ'' ಎಂದ.

"ನನಗೆ ಗಂಜಿ ಬೇಡ .... ಅಡಿಗೆಯವನು ಬೇರೆ .... ಬಂದಿಲ್ಲ. ನೀವೇ ಅಡಿಗೆ ಬೇರೆ .... ಮಾಡಬೇಕು .... ಗಂಜಿ .... ತೊಂದ್ರೆ .... ಹಾಲು, ಬರೀ ಹಾಲು .... ಸಾಕು."

"ತೊಂದ್ರೆ! ಏನು ಮಹಾ ತೊಂದ್ರೆ. ನನಗೆ ಕೈಮೇಲೆ ಘಾಯ ಆಗಿದ್ದಾಗ ನೀನು ರಾತ್ರಿ ಎಲ್ಲಾ ಎದ್ದು, ಉಪ್ಪು ಕಾವು ಕೊಡುತ್ತಿರಲಿಲ್ಲವೇ?''

ರಘು ಗಂಜಿ ಮಾಡಿಕೊಂಡು ತಂದಾಗ ಸೀತೆ ಭಯಗ್ರಸ್ತಳಾಗಿದ್ದಳು. ಮೇಲುಸುರಿನಲ್ಲಿ "ನೀವು ಗಂಜಿ ಮಾಡಲಿಕ್ಕೆ....ಹೋದಮೇಲೆ....ಇನ್ನೊಂದು ಎಲೆ....ಬಿತ್ತು....ನಾಲ್ಕೇ....ಉಳಿದಿರೋದು...."

ರಘು ಕಿಟಕಿಯ ಕಡೆ ನೋಡಿದ. ನಾಲ್ಕೇ ಎಲೆ ಉಳಿದಿತ್ತು. ರಘುವಿನ ಹೃದಯದಲ್ಲಿ ಸಹ ಒಂದು ಬಗೆಯ ಭಯ ಉಂಟಾಯಿತು ಕ್ಷಣಕಾಲ.

"....ಸಂಜೆ ಹೊತ್ತಿಗೆ....ಎಲ್ಲಾ ಬಿದ್ದು ಹೋಗುತ್ತೆ....ರಾತ್ರಿ....ಇವತ್ತು ರಾತ್ರಿ....ಹೂ ಉದರುತ್ತೆ....ನಾನೂ...." ನಿಟ್ಟುಸಿರು.

ರಘು ಅವಳ ತಲೆಯಮೇಲೆ ಬಾಗಿ, ಆಕೆಯ ಹಣೆಯ ಮೇಲಿನ ಬೆವರನ್ನು ಮೃದುವಾಗಿ ಒರಸಿ, "ಸೀತಾ, ನೀನು ಕಿಟಕಿಯ ಕಡೆ ಇನ್ನುಮೇಲೆ ಖಂಡಿತ ನೋಡಕೂಡದು. ಇರೋದೊಂದು ಕಿಟಕಿ ಮುಚ್ಚಿದರೆ ಬೆಳಕು ಗಾಳಿ ಎರಡೂ ತಪ್ಪುತ್ತಲ್ಲಾ ಅಂತ ಬಾಗಿಲು ಹಾಕುವ ಹಾಗಿಲ್ಲ....ಅಥವಾ ಬೇರೆ ಕೋಣೆಯಲ್ಲಿ ಹಾಸಿಗೆ ಹಾಕಿಕೊಡಲಾ" ಎಂದ.

"ಬೇಡ....ಇಲ್ಲೇ ಇರ್ಲಿ."

"ಹಾಗಾದರೆ ಸುಮ್ಮನೇ ಮಲಗಿಕೊ"

ರಘು ಆಫೀಸು ರೂಮಿಗೆ ಹೋಗಿ ಅಲ್ಲಿದ್ದ ಕಿಟಕಿ ಪರದೆಯನ್ನು ತಂದು, ಎದುರು ಕಿಟಕಿಗೆ ಕಟ್ಟಿಬಿಟ್ಟ. ಸೀತಾ ನಿಟ್ಟುಸಿರುಬಿಟ್ಟು ಕಣ್ಣು ಮುಚ್ಚಿಕೊಂಡು ಮಲಗಿದಳು.

ಸಾಯಂಕಾಲ ಓಬಜ್ಜಿ ಬಂದಾಗ ರಘು ಅಡಿಗೆ ಮನೆಯಲ್ಲಿ ಕೆಲಸ

ದಲ್ಲಿದ್ದ. ಕೋಣೆಯಲ್ಲಿ ಸೀತಾ ಒಬ್ಬಳೇ ಕಿಟಕಿಯ ಪರದೆಯನ್ನೇ ನೋಡುತ್ತಾ ಮಲಗಿದ್ದಳು. ಓಬಜ್ಜಿ ಬಂದದ್ದನ್ನು ಕಂಡು "ಓಬಜ್ಜಿ .... ಆ ಕಿಟಕಿ ಪರದೇನ.... ಪಕ್ಕಕ್ಕೆ ಎಳೆದು ಬಿಡು....ಬಹಳ ಶೆಖೆ....'' ಎಂದ. ಏನನ್ನೂ ಅರಿಯದ ಓಬಜ್ಜಿ ಕಿಟಕಿ ಪರದೆಯನ್ನು ಒಂದೆಡೆಗೆ ಓರೆಮಾಡಿದಳು. ಎದುರಿಗೆ ಕಂಡಿತು, ಸೂರ್ಯಕಾಂತಿ ಗಿಡ. ಒಂದೇ ಎಲೆ ಉಳಿದಿತ್ತು. ಮೇಲೆ ಹೂ ಒಂದಿತ್ತು. ಸೀತೆಯ ಮುಖ ವಿವರ್ಣವಾಯಿತು. ಮೈ ನಡುಗಿತು. ಅಷ್ಟರಲ್ಲಿ ರಘು ಅಲ್ಲಿಗೆ ಬಂದು ಸೀತೆಯ ಮುಖವನ್ನು ನೋಡಿ, ಕೂಡಲೇ ಕಿಟಕಿಯ ಕಡೆ ನೋಡಿದ. ಅವನ ಎದೆ ಝಲ್ಲೆಂದಿತು. ಒಂದು ಕ್ಷಣಕಾಲ ಸ್ತಂಭಿತನಾಗಿ ಗಿಡವನ್ನು ನೋಡುತ್ತಾ ನಿಂತ. ಅನಂತರ ಓಬಜ್ಜಿಗೆ "ಆ ಪರದೆಯನ್ನು ಏಕೆ ಓರೆಮಾಡಿದಿ" ಎಂದು ಗದರಿಸಿದ.

ಭೀಕರವಾದ ನಗೆಯನ್ನು ಮುಖದ ಮೇಲೆ ಹಾಯಿಸಿ ಸೀತಾ, "ನಾನೇ ಎಳೆಸಿದೆ" ಎಂದಳು.

ಸೀತೆಗೆ ಎದುರು ಗಿಡದ ವಿಷಯದಲ್ಲಿದ್ದ ಭೀತಿಯ ನಂಬುಗೆಯನ್ನು ರಘು ಓಬಜ್ಜಿಗೆ ವ್ಯಕ್ತಪಡಿಸಿ, ಪರದೆಯನ್ನು ಪುನಃ ಮೊದಲಿನಂತೆ ಕಿಟಕಿಯ ಅಡ್ಡಗಲಕ್ಕೂ ಎಳೆದ.

ಮಂಚದ ಪಕ್ಕದಲ್ಲಿ ನೆಲದ ಮೇಲೆ ಕುಳಿತುಕೊಂಡು ಎಲೆಗೆ ಸುಣ್ಣ ಹಚ್ಚುತ್ತಾ, ಓಬಜ್ಜಿ "ಏ ಬಿಡವ್ವಾ ಸೀತವ್ವಾ. ಸಣ್ಣ ಪಿಳ್ಳೆಗಳೂ ಹೀಗೆ ಹೆದರೊಲ್ಲ. ವಾಸಿ ಆಗೇಬಿಟ್ಟಿದೆ ಅಂದ್ರಂತೆ ಡಾಕ್ಟ್ರು, ರಘಪ್ಪ ಹೇಳ್ತಾನೆ. ಬಿಡು ಆ ಬಡಕಲು ಗಿಡ ನಿನಗೇನು ಮಾಡುತ್ತೆ. ನಿನಗೆ ವಾಸಿ ಆಗ್ಲಿ ಈಸಲ, ಬಣ್ಣಗಳು ಕಲಸಿ ಚಿತ್ತಾರ ಬರಿಯೋದು ಒಸಿ ಹೇಳಿಕೊಡ್ತೇನೆ" ಎಂದಳು.

"ಈಗ ಹೆದರೊಲ್ಲಾ ಓಬಜ್ಜಿ, ಅವಳು. ಆಮೇಲೆ ನಿನ್ನ ಚಿತ್ರಕಲೆ ಸ್ವರೂಪ ನೋಡಿ ಬೆದರುತ್ತಾಳೆ ಅಷ್ಟೆ" ರಘು ಹೇಳಿದ.

"ಏ ಬಿಡು ನೀನಂತು. ನೀನು ಹಂಗೇ ಹೇಳ್ತಾ ಇರು. ಒಂದಲ್ಲ ಒಂದಿನ ನಿನಗೂ ಒಸಿ ಬರೆದು ತೋರಿಸ್ತೇನೆ, ಒಂದು ದಿವಿನಾದ ಚಿತ್ತಾರ.''

ರಘು ಕೆಲಸವನ್ನೆಲ್ಲಾ ಮುಗಿಸಿಕೊಂಡು ಬರುವವರೆಗೂ ಓಬಜ್ಜಿ ಅಲ್ಲೇ ಕುಳಿತಿದ್ದು, ರಘು ಬಂದ ಮೇಲೆ ಮಲಗಲು ತಾನು ಹೊರಗಡೆ

ವರಾಂಡಾಕ್ಕೆ ಹೋದಳು. ಹೋಗುವಾಗ "ಏ ಸೀತವ್ವ, ಹೆದರಬೇಡ. ಹೂವು ಏನು ಮಾಡುತ್ತೆ ನಿಂಗೆ" ಎಂದು ಧೈರ್ಯ ಹೇಳಿ ಹೋದಳು.

ಆ ರಾತ್ರಿ ವಿಪರೀತ ಹಿಮ. ಬಲವಾಗಿ ಬೀಸುತ್ತಿದ್ದ, ಕೊರೆಯುವ ಗಾಳಿ. ಬೆಳಗಿನ ಝಾವವಲ್ಲಂತೂ, ಅತಿಯಾದ ಹಿಮವೃಷ್ಟಿ. ಮೈತುಂಬ ಬೆಚ್ಚಗೆ ಹೊದೆದುಕೊಂಡಿದ್ದರೂ ಮೈಯಲ್ಲೆಲ್ಲಾ ನಡೆದುಹೋಗುವಷ್ಟು ಚಳಿ. ರಾತ್ರಿ ನಾಲ್ಕೈದು ಬಾರಿ ಸೀತಾ "ಹೂ ಏನಾಗಿದೆಯೋ ಏನೋ" ಎಂದು ಮುಲುಗಿದಳು. ರಘು ಕೇಳಿಯೂ ಕೇಳದಂತೆ ಸುಮ್ಮನೆ ಮಲಗಿದ್ದ. ಉತ್ತರ ಕೊಡಲಿಲ್ಲ.

ಮರುಬೆಳಗ್ಗೆ, ಸೀತಾ ಕಿಟಕಿಯ ಕಡೆ ಹತಾಶದೃಷ್ಟಿಯಿಂದ ನೋಡುತ್ತಾ ಸಂಕಟಪಡುತ್ತಾ ನಿಶ್ಶಕ್ತಳಾಗಿ ಮಲಗಿದ್ದುದನ್ನು ರಘು ಎದ್ದಾಗ ನೋಡಿ ಮರುಗಿದ. ಸೀತೆ "ಕಿಟಕಿ ಪರದೆ ತೆಗೀರಿ" ಎಂದು ಮೊರೆಯಿಟ್ಟಳು. ನಿರಾಕರಿಸಲಾರದೆಯೂ ಕುತೂಹಲದಿಂದಲೂ ರಘು ಕಿಟಕಿ ಬಳಿ ಬಂದು ನೋಡಿ ಅಚ್ಚರಿಗೊಂಡು, ಪರದೆಯನ್ನು ಓರೆಮಾಡಿದ. ಎದುರಿಗೆ ಗಿಡದ ತುದಿಗೆ ಸೂರ್ಯಕಾಂತಿ ಹೂ ಮನಸ್ಸನ್ನು ಆಕರ್ಷಿಸುತ್ತಾ ಇತ್ತು. ಆ ಒಂದು ಎಲೆಯೂ ರಾತ್ರಿ ಉದುರಿತ್ತು. ಹೂ ಮಾತ್ರ ಎದುರಿಗೆ ಕಾಣುವಂತೆ ಉಳಿದಿತ್ತು. ಸೀತೆಯ ಮುಖದಲ್ಲಿ ಅಚ್ಚರಿ ತಲೆದೋರಿ, ಸಂತಸ ತುಂಬಿ, ಮುಖ ಹಿಗ್ಗಿತು. "ರಾತ್ರೆ ಹೂ ಖಂಡಿತ ಬಿದ್ದೇ ಇರುತ್ತೆ ಅಂದುಕೊಂಡಿದ್ದೆ" ಎಂದಳು.

ರಘು ಮೆಲ್ಲನೆ ಪುನಃ ಪರದೆಯನ್ನು ಕಿಟಕಿಯ ಅಗಲಕ್ಕೂ ಎಳೆದ. ಅನಂತರ ಸೀತೆಯ ಬಳಿ ಬಂದು "ಇನ್ನಾದರೂ ಧೈರ್ಯ ತಾಳಿಕೊ ಸೀತಾ" ಎಂದ.

ರಘು ಕಾಫಿ ಮಾಡಿಕೊಂಡು ಬಂದಾಗ, ಸೀತಾ "ಓಬಜ್ಜಿ ಯಾಕೆ ಇವತ್ತು ಇಷ್ಟು ಹೊತ್ತಾದರೂ ಬರಲಿಲ್ಲ?" ಎಂದು ಕೇಳಿದಳು.

"ಹೇಳಿ ಕಳುಹಿಸಿದ್ದಳು, ಪಕ್ಕದ ಮನೆಯವರ ಮನೆ ಮದುವೆ ಗಲಾಟೆಯಂತೆ. ಅವರು ಬಹಳ ಒತ್ತಾಯ ಮಾಡಿ ನಿಲ್ಲಿಸಿಕೊಂಡಿದಾರಂತೆ. ಮೂರು

ದಿನ ರಜಾ ಆವಳಿಗೆ. ಅವಸರ ಬಿದ್ದರೆ, ಹೇಳಿ ಕಳುಹಿಸಿದರೆ ಬಂದು ಬಿಡು ತ್ತಾಳಂತೆ. ಇರಲಿ ಬಿಡು ಮೂರು ದಿವಸ, ಆವಳೂ ವಿರಾಮವಾಗಿ. ''

ಸೀತಾ, ಮಧ್ಯಾಹ್ನ ರಘು ಕೈಲಿ ಪುನ ಕಿಟಿಕಿಯ ಪರದೆಯನ್ನು ಎಳೆಸಿನೋಡಿದಳು. ಉಹುಂ, ಹೂ ಬಿದ್ದಿರಲಿಲ್ಲ. ಬೆಳಗಿನಂತೆಯೇ ಕಳೆ ತುಂಬಿಕೊಂಡಿತ್ತು. ಸೀತೆಯ ಮನದಲ್ಲಿ ಉತ್ಸಾಹ ಸ್ಥೈರ್ಯಗಳು ಸಂಪೂರ್ಣವಾಗಿ ಪುನ ನೆಲೆಗೊಂಡವು. "ನಾನು... ಕೆಟ್ಟ ಕೆಟ್ಟ ಮಾತು ಆಡ್ದೇ ಅಲ್ವೇ....ಆದ್ರೆ ನೋಡ್ರಿ. ಆ ಹೂ ಬಿದ್ದ ಹಾಗೂ, ಆ ವರೆಗೆ ನನ್ನ ಜೀವ ಇದ್ದ ಹಾಗೂ, ಆ ಹೂ ಬಿದ್ದ ಕೂಡಲೇ ನಾನೂ ಹೋದ ಹಾಗೂ ಮೊನ್ನೆ ರಾತ್ರಿ ಕನಸು ಬಿದ್ದಿತ್ತು. ಆದಕ್ಕೇ ಭಯವಾಗಿದ್ದು. ಸದ್ಯ ಕನಸು ಸುಳ್ಳಾಯ್ತಲ್ಲ. ಎಲೆಗಳು ಎಲ್ಲಾ ಬಿದ್ದೋ. ಆ ಹೂ ಬೀಳ್ಳೇ ಇಲ್ಲಲ್ಲ" ಎಂದು ಹೇಳುತ್ತಾ ತನ್ನ ಕೈಯ್ಯನ್ನೆತ್ತಿ ಬೆರಳಿನಿಂದ ಕಿಟಿಕಿಯ ಕಡೆ ತೋರಿ ಸಿದಳು—ಕೈ ಬಳೆಗಳು ಜಣ ಜಣ ಶಬ್ದ ಮಾಡುತ್ತಾ ಮೊಳಕೈ ವರೆಗೆ ಜಾರಿ ಬಂದವು. " ನೋಡ್ರಿ, ಒಂದು ಬಳೇನೂ ಅಲ್ಲಾಡುತ್ತಾ ಇರಲಿಲ್ಲ. ಈಗ ಮೊಳಕೈ ವರೆಗೂ ಬರುತ್ತೆ. ನನಗೆ ವಾಸಿ ಆದ ಮೇಲೆ ಎರಡು ಜತೆ ಹೊಸ ನಮೂನೆ ಬಳೆ ಮಾಡಿಸಿಕೊಡಬೇಕು " ಎಂದಳು.

ಆ ದಿನ ಡಾಕ್ಟರು ಬಂದು ಸೀತೆಯನ್ನು ಪರೀಕ್ಷಿಸಿದ ನಂತರ ರಘೂಗೆ ವರಾಂಡಾದಲ್ಲಿ, " ಪರವಾ ಇಲ್ಲ. ಬಹಳ ಬದಲಾವಣೆಯಾಗಿದೆ. ಇನ್ನು ಭಯವಿಲ್ಲ. ಓಬಜ್ಜೀಗೆ ಪಾಪ, ಎದೆ ಬಹಳ ಕೆಡುತ್ತಾ ಬಂದಿದೆ. ಬಹಳ ಕೆಟ್ಟ ಬ್ರಾಂಕೋ ನಿಮೋನಿಯಾ. ಆಸೆ ಇಲ್ಲ '' ಎಂದು ಹೇಳಿ ಹೋದರು.

ಸುಮಾರು ನಾಲ್ಕೈದು ದಿನಗಳಾದ ಮೇಲೆ ಒಂದು ಸಲ ಸೀತಾ " ಓಬಜ್ಜಿ ಏಕೆ ಬರಲಿಲ್ಲ. ಆ ಹುಡುಗೀದು ಲಗ್ನ ಆಗಿಹೋಯಿತಲ್ಲವೆ " ಎಂದು ಕೇಳಿದಳು.

ಆಗ ರಘು ಹೇಳಿದ. " ಕೇಳು ಸೀತಾ. ಓಬಜ್ಜಿ, ಪಾಪ, ಮೂರು ದಿನದ ಕೆಳಗೆ ತೀರಿಹೋದಳು. ನಿನಗೆ ಮುಂಚೆಯೇ ನಿಜ ಹೇಳಿದರೆ ನೀನು ಭಯಗೊಂಡು ಜ್ವರ ಎಲ್ಲಿ ಮರಕಳಿಸುತ್ತೋ ಎಂತ ಹೇಳಲಿಲ್ಲ. ಈಗ ನಿಜ ವಾದ ವಿಚಾರ ಹೇಳ್ತೀನೆ ಕೇಳು. ನೀನು ಸೂರ್ಯಕಾಂತಿ ಗಿಡದ ಎಲೆ

ಗಳನ್ನ ಎಣಿಸುತ್ತಾ ಇರಲಿಲ್ಲವೆ? ಒಂದು ದಿನ ಒಂದೇ ಒಂದು ಎಲೆ, ಒಂದು ಹೂ ಮಾತ್ರ ಉಳಿದಿತ್ತು ನೋಡು. ಆ ಹೂ ರಾತ್ರಿ ಬೀಳುತ್ತೆಂದೂ ಆಗ ನೀನೂ ಹೋಗುತ್ತೀ ಎಂದೂ ನೀನು ಹೆದರಿರಲಿಲ್ಲವೆ? ನಿನ್ನ ಮನಸ್ಸಿನ ಸ್ಥಿತಿಯನ್ನು ಓಬಜ್ಜಿ ಚೆನ್ನಾಗಿ ತಿಳಿದುಕೊಂಡಳು. ಹೂ ಬಿದ್ದ ಸಂಗತಿ ನಿನಗೆ ತಿಳಿದರೆ ನಿನ್ನ ಪ್ರಾಣಕ್ಕೆ ಅಪಾಯ ಇದೆ ಎಂದು ಅವಳು ಗ್ರಹಿಸಿದಳು. ಎಂದಿನಂತೆ ಅವಳು ಮಲಗಲಿಕ್ಕೆ ವರಾಂಡಾಕ್ಕೆ ನಿನಗೆ ಧೈರ್ಯ ಹೇಳಿ ಹೋದದ್ದು ನೆನಪಿದೆಯೆ! ಆ ದಿವಸ ಮಧ್ಯರಾತ್ರಿ ಕಳೆದು, ಬೆಳಗಿನ ಝಾವ ನಾಲ್ಕು ಗಂಟೆ ಸಮಯದಲ್ಲಿ ಪೋಲಿಸಿನವರು ಬೀಟು ಪುಸ್ತಕ ರುಜು ಮಾಡಲಿಕ್ಕೆ ನಮ್ಮ ಕಾಂಪೌಂಡು ಬಳಿಗೆ ಬಂದವನು, ಗೋಡೆ ಪಕ್ಕದಲ್ಲಿ ಸೂರ್ಯಕಾಂತಿ ಹೂವಿನ ಗಿಡದ ಹತ್ತಿರ ಸೆಟೆದುಕೊಂಡು ಬಿದ್ದಿದ್ದ ಓಬಜ್ಜಿಯನ್ನು ಕಂಡು ಕೂಡಲೇ ಆಕೆಯನ್ನು ಆಸ್ಪತ್ರೆಗೆ ಸಾಗಿಸಿದನಂತೆ. ಮರುಬೆಳಿಗ್ಗೆ ಆತನೇ ನನಗೆ ಬಂದು ಹೇಳಿದ. ಏನು ಕಾರಣ, ಓಬಜ್ಜಿ ಅಲ್ಲಿ ಯಾಕೆ ಬಿದ್ದಿದ್ದಳು ಅಂತ ನೋಡಲಿಕ್ಕೆ ನಾನು ಗಿಡದ ಹತ್ತಿರ ಹೋದಾಗ, ಅಲ್ಲಿ ಒಂದು ಲಾಟೀನೂ, ನಾಲ್ಕೈದು ಚಿಪ್ಪಿನಲ್ಲಿ ಕಲಸಿದ ಬಣ್ಣಗಳೂ, ತೆಂಗಿನ ನಾರಿನ ಗುಂಜುಗಳೂ, ಗಿಡದಿಂದ ಉದುರಿ ಬಿದ್ದಿದ್ದ ಸೂರ್ಯಕಾಂತಿ ಹೂವೂ ಎಲೆಗಳೂ ಬಿದ್ದಿದ್ದವು. ಗಿಡದ ದಂಟಿನ ತುದಿಗೆ ಸರಿಯಾಗಿ, ಅದಕ್ಕೇ ಸೇರಿಕೊಂಡಿರುವಂತೆ ಗೋಡೆಯ ಮೇಲೆ ಸೂರ್ಯಕಾಂತಿ ಹೂವಿನ ಚಿತ್ರ ಇತ್ತು. ಅದೇ ನೋಡು ಎದುರಿಗೆ ಕಾಣೋದು, ಅಲುಗಾಡದೆ ಇದೆ ನೋಡು. ಓಬಜ್ಜಿ ಬರೆದ ದಿವಿನಾದ ಚಿತ್ತಾರ. ಮೂಗಿನ ಮೇಲೆ ಬೆರಳು ಮಡಗಬೇಕು."

---

Last Leaf.

# ಪ್ರಶ್ನೋತ್ತರಗಳು

"ಸುವರ್ಣಮಂದಿರ"ದ ಲಕ್ಷ್ಮೀಪತಯ್ಯ ತನ್ನ ಹೆಸರನ್ನೂ ತನ್ನ ಮನೆಯ ಹೆಸರನ್ನೂ ಅಕ್ಷರಶಃ ನಿಜವೆನಿಸಿಬಿಟ್ಟಿದ್ದ. ಆತ ಬೆಂಗಳೂರಿಗೆ ಮೊದಲನೆಯ ಶ್ರೀಮಂತ. ಆದರ ಹೆಗ್ಗುರುತು—ರಾತ್ರಿ ಉಂಡಮೇಲೆ ಎಣಿಸಿ ನಡೆಯುವ ಶತಪಥವೇ ಅವನ ಬಾಳಿನಲ್ಲಿ ದೀರ್ಘ ಕಾಲ್ನಡಿಗೆಯಾಗಿದ್ದುದು.

ಮನುಷ್ಯ ಆಂದಮೇಲೆ ತಾಪತ್ರಯ ಇರಲೇ ಬೇಕಷ್ಟೆ. ಲಕ್ಷ್ಮೀಪತಯ್ಯನಿಗೆ ಸ್ವಂತ ತಾಪತ್ರಯ ಇರಲಿಲ್ಲ; ಇತರರ ತಾಪತ್ರಯಗಳನ್ನು ತನ್ನದಾಗಿ ಮಾಡಿಕೊಂಡಿದ್ದ. ಆದ್ದರಿಂದಲೇ ಅದೇ ಬೀದಿಯ ಕಡೆಯ ಮನೆಯಲ್ಲಿ ಒಬ್ಬೊಂಟಿಗನಾಗಿ ವಾಸಮಾಡುತ್ತಿದ್ದ ತನ್ನ ಸೋದರಳಿಯ ಶ್ರೀನಿವಾಸನನ್ನು ತನ್ನ ದತ್ತುಮಗನನ್ನಾಗಿ ಸ್ವೀಕರಿಸಲು ನಿಶ್ಚಯಿಸಿದ್ದ. ಶ್ರೀನಿವಾಸನಿಗೆ ತಂದೆ ತಾಯಿ ಇರಲಿಲ್ಲ. ಸೋದರಮಾವನ ದ್ರವ್ಯಸಹಾಯದಿಂದ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿದ್ದ. ಕಡೆಯ ಪರೀಕ್ಷೆಗೆ ಅಭ್ಯಾಸಮಾಡುತ್ತಿದ್ದ. ಮೆಡಿಕಲ್ ಕಾಲೇಜಿನಲ್ಲಿ ಶ್ರೀನಿವಾಸ ಉತ್ತೀರ್ಣನಾದ ಮೇಲೆಯೇ ಆತನನ್ನು ದತ್ತು ಸ್ವೀಕಾರಮಾಡಿಕೊಳ್ಳಬೇಕೆಂದು ಲಕ್ಷ್ಮೀಪತಯ್ಯನ ಅಭಿಮತ. ಹುಷಾರಿ ಲಕ್ಷ್ಮೀಪತಯ್ಯ; ಇಲ್ಲದಿದ್ದರೆ ಲಕ್ಷ್ಮೀಪತಿಯಾಗುತ್ತಿದ್ದನೆ?

"ಸುವರ್ಣ ಮಂದಿರ"ದಲ್ಲಿದ್ದವರು, ಲಕ್ಷ್ಮೀಪತಯ್ಯ, ಮತ್ತು ಲಲಿತೆ. ಲಲಿತೆ ಲಕ್ಷ್ಮೀಪತಯ್ಯನ ಹೆಂಡತಿಯ ಸಂಬಂಧದವರ ಕಡೆಯ ಅನಾಥ ಹುಡುಗಿ. ಮಕ್ಕಳಿಲ್ಲದ್ದರಿಂದ ಲಕ್ಷ್ಮೀಪತಯ್ಯನ ಹೆಂಡತಿ ಲಲಿತೆಯನ್ನು ಚಿಕ್ಕ ಮಗುವಾದಂದಿನಿಂದ ಸಾಕಿದ್ದಳು. ಹೆಂಡತಿ ಗತಿಸಿದ ಮೇಲೂ ಲಲಿತೆಯನ್ನು ಸಲಹುತ್ತಾ ಬಂದಿದ್ದ ಲಕ್ಷ್ಮೀಪತಯ್ಯ. ಲಲಿತೆ ಸೀನಿಯರ್ ಇಂಟರ್ ಮೀಡಿಯೇಟಿನಲ್ಲಿ ಓದುತ್ತಿದ್ದಳು; ರೂಪವತಿ.

ಶ್ರೀನಿವಾಸ, ಲಲಿತೆ ಇಬ್ಬರೂ ಒಂದಲ್ಲ ಒಂದು ದಿನ ಅಗ್ನಿಸಾಕ್ಷಿಯಾಗಿ ಸಪ್ತಪದಿ ನಡೆಯುತ್ತಾರೆಂದು ಎಲ್ಲೆಲ್ಲೂ ವದಂತಿ. ಕಥೆ ಪ್ರಾರಂಭ ಹೀಗೆ ತಾನೆ ಆಗಬೇಕು. ಹೀಗೆಯೇ ಮುಗಿಸಿಬಿಟ್ಟರೆ ಕಥೆ ಆಗುವುದಿಲ್ಲ, ಬಾತ್ಮಿಯಾಗುತ್ತದೆ. ಆದ್ದರಿಂದ ಮಧ್ಯೆ ಒಂದು ತೊಡಕು ಹಾಕಬೇಕು. ಆ ತೊಡಕು ಬಿಚ್ಚಿದರೆ ಕಥೆಯಾದೀತು. ಇರಲಿ.

ಇದ್ದಕ್ಕಿದ್ದಹಾಗೆ ಒಂದು ಕಾಗದ ಬಂತು ಲಕ್ಷ್ಮೀಪತಯ್ಯನಿಗೆ, ಒಂದು ದಿನ. ಲಕ್ಷ್ಮೀಪತಯ್ಯನಿಗೆ ಒಬ್ಬ ತಮ್ಮ ಇದ್ದ. ಅಣ್ಣ ತಮ್ಮಂದಿರ ಮಧ್ಯೆ ಏನೋ ಮಾತು ಬಂದು, ತಮ್ಮ ಊರು ಮನೆ ಬಿಟ್ಟು ತನ್ನ ಹೆಂಡತಿ ಒಂದು ಚಿಕ್ಕ ಹೆಣ್ಣುಕೂಸಿನ ಜೊತೆಗೆ, ಹದಿನೆಂಟು ವರ್ಷಗಳ ಹಿಂದೆ ಸಿಂಹಳ ದ್ವೀಪಕ್ಕೆ ಹೊರಟು ಹೋಗಿದ್ದ. ಪುನಃ ಆತನ ಸಮಾಚಾರವನ್ನೇ ಯಾರೂ ಕೇಳಿರಲಿಲ್ಲ. ಕಾಗದ ಬಂದದ್ದು ಸಿಂಹಳ ದ್ವೀಪದಿಂದ. ಲಕ್ಷ್ಮೀಪತಯ್ಯನ ತಮ್ಮ ಸತ್ತುಹೋದನೆಂದೂ ಆತನ ಹೆಂಡತಿ ಬಹಳ ವರ್ಷಗಳ ಹಿಂದೆಯೇ ಸತ್ತುಹೋಗಿದ್ದಾಳೆಂದೂ, ಅವರ ಮಗಳು ಸುನೀತಿ ಅಲ್ಲಿಂದ ರವಾನಿಸಲ್ಪಟ್ಟಿರುವಳೆಂದೂ ಬೆಂಗಳೂರು ರೈಲ್ವೆಸ್ಟೇಷನ್ನಿನಲ್ಲಿ ಮರು ದಿನ ಬಂದು ಇಳಿಯುವಳೆಂದೂ ತಿಳಿಸಿತು ಆ ಕಾಗದ. ಸಿಂಹಳ ದ್ವೀಪದ ಸದ್ಗೃಹಸ್ಥರೊಬ್ಬರು ಬರೆದಿದ್ದರು.

ಸರಿ, ಮರುದಿನ ಲಲಿತೆ, ಲಕ್ಷ್ಮೀಪತಯ್ಯ ಇಬ್ಬರೂ ರೈಲ್ವೆಸ್ಟೇಷನ್ನಿಗೆ ಹೋದರು ಸುನೀತಿಯನ್ನು ಕರೆತರುವುದಕ್ಕೆ. ನಿಮಗೆ ಅನಿಸಬಹುದು; ಸಿಂಹಳದ್ವೀಪದಿಂದ ಬರುವವಳು; ಅವಳ ಉಡುಪೇನು, ತೊಡುಗೆಯೇನು? ಅವಳ ಸೊಬಗೇನು, ಠೀವಿಯೇನು? ಅಂತ. ರೈಲು ಬಂದು ಗಾಡಿ ನಿಂತು, ಅವಳು ಕೆಳಗೆ ಇಳಿದಾಗ, ಸುನೀತಿ ಉಟ್ಟ ಕರೀನೂಲಿನ ಸೀರೆ, ಬಿಳೀ ಮಲ್ಲಿನ ಜಾಕಿಟ್, ಕಾಲಲ್ಲಿ ಸಾದಾಚಪ್ಪಲಿ, ತಲೆಯಲ್ಲಿ ಕೆದರಿದ ಕೂದಲು, ಎಣ್ಣೆಗೆಂಪು ಮೈ ಬಣ್ಣಕ್ಕೆ ಸರಿ ಹೊಂದುವ ಹಣೆಮಧ್ಯದ ದುಂಡು ಕುಂಕುಮ, ಇದನ್ನು ನೋಡಿದ್ದರೆ ಆಕೆ ನಿಮಗೆ ಅರ್ಥವಾಗದೆ ಬೆಪ್ಪಾಗುತ್ತಿದ್ದಿರಿ.

ಆಕೆಯನ್ನು ಗೊತ್ತು ಹಿಡಿದನಂತರ, ಲಲಿತೆ ಅವಳ ಭುಜದಮೇಲೆ ಕೈ ಇಟ್ಟು "ನೀನೇನೆ ಸುನೀತಿ?" ಎಂದಳು.

"ಹೌದು"

"ನಾನು ಲಲಿತ"

"ಓ"

"ಚೆನ್ನಾಗಿದ್ದೀಯಾ"

"ಹೂಂ"

"ರೈಲು ಪ್ರಯಾಣ ಬಹಳ ಆಯಾಸವಾಗಿತ್ತೆ? ಮೂರು ದಿನ ಆಗಿರಬೇಕು ರೈಲು ಹತ್ತಿ."

"ಇಲ್ಲ"

ಲಕ್ಷ್ಮೀಪತಯ್ಯ ವಾತ್ಸಲ್ಯದಿಂದ ಅವಳ ಮೈದಡವಿ "ಬಾಮ್ಮಾ. ನಮ್ಮ ಮನೆ ಮಗಳು ನೀನು. ನಿನ್ನ ಮನೆ ಅಂತ ತಿಳಿದುಕೋ ನನ್ನ ಮನೆಯನ್ನು. ಲಲಿತೆ ನನ್ನ ಮನೆಯಲ್ಲೇ ಇದ್ದಾಳೆ. ಇಬ್ಬರೂ ಅಕ್ಕ ತಂಗಿಯಂತೆ ಇರಬೇಕು."

"ಆಗಲಿ"

ಮರು ದಿನ ಶ್ರೀನಿವಾಸ ಬಂದಾಗ, ಲಕ್ಷ್ಮೀಪತಯ್ಯ ಸುನೀತಿಯನ್ನು ಕರೆದು, "ಈತ ನನ್ನ ಅಳಿಯ ಕಣಮ್ಮ; ಶ್ರೀನಿವಾಸ. ಇದೇ ರಸ್ತೆ ಕಡೆಯಲ್ಲಿ ಈತನ ಮನೆ ಇದೆ. ಮೆಡಿಕಲ್ ಕಾಲೇಜಿನಲ್ಲಿ ಓದುತ್ತಾ ಇದಾನೆ.... ನೋಡು ಶ್ರೀನಿವಾಸ, ನನ್ನ ತಮ್ಮ ಈ ಮನೆಯಿಂದ ಹೋಗೋಕೆ ಮುಂಚೆ, ನೀನು ಹುಡುಗ ಆಗಿದ್ದಾಗ, ಇಲ್ಲಿಗೆ ಆಗಾಗ್ಗೆ ಬಂದು ಆಡಿಸುತ್ತಾ ಇದ್ದ ಕೂಸು ಕಣಪ್ಪ ಇವಳು, ಸುನೀತಿ" ಎಂದ.

ಶ್ರೀನಿವಾಸ – "ಬಹಳ ಸಂತೋಷ. ನನಗೆ ನೆನಪಿದೆ. ಒಂದು ದಿನ ಬಹಳ ಹಟಮಾಡಿ ಅಳುತ್ತಿದ್ದಾಗ, ಚೆನ್ನಾಗಿ ಕಿವಿ ಹಿಂಡಿ ಬಿಟ್ಟಿದ್ದೆ. ಏನು ಸುನೀತಿ— ಅಂದ ಹಾಗೆ, ನಾನು ಔಪಚಾರಿಕನಲ್ಲ. ಸರಳ ವೃತ್ತಿಯವನು. 'ಸುನೀತಿ' 'ನೀನು' ಎಂದು ಸಲಿಗೆಯಿಂದ ಮಾತಾಡಿಸಬಹುದಷ್ಟೆ" ಎಂದು ಕೇಳಿದ.

ತುಂಬಿದ ಕಣ್ಣುಗಳಿಂದ ಆತನನ್ನೊಮ್ಮೆ ಸುನೀತಿ ನೋಡಿದಳು; ಕ್ಷಣಕಾಲ ಆತನ ಮುಖವನ್ನು ಈಕ್ಷಿಸಿದಳು. ಆತ ಮೈತ್ರೀಭಾವದಿಂದ ಆ ನೋಟವನ್ನು ಎದುರುಗೊಂಡ.

ಅನಂತರ ಸುನೀತಿ. ಸಲಿಗೆಯಿಂದಲೆ "ಅದಕ್ಕೇನಂತೆ, ನಾವಿಬ್ಬರೂ ಸ್ನೇಹಿತರೆ" ಎಂದಳು.

ಒಂದು ಗಂಡು ಒಂದು ಹೆಣ್ಣು ಬರುವ ಪ್ರಸಂಗಗಳಲ್ಲಿ ನಾವು ಅವರಿಬ್ಬರನ್ನು ಜೋಡಿ ಎನ್ನುತ್ತೇವೆ. ಆದರೆ ಒಂದು ಗಂಡು ಎರಡು ಹೆಣ್ಣು, ಎರಡು ಗಂಡು ಒಂದು ಹೆಣ್ಣು, ಅಥವಾ ಅನೇಕ ವೇಳೆ ಇಜ್ಜೋಡು ದಂಪತಿಗಳೊಡನೆ ಸೇರಿಬರುವ ಇನ್ನೊಂದು ವ್ಯಕ್ತಿ, ಈ ತರದ ಪ್ರಸಂಗಗಳಲ್ಲಿ ಒಂದು ಪ್ರಶ್ನೆ ಎದ್ದುಬಂದು, ಕ್ರಮವಾಗಿ ಅವರಲ್ಲಿ ಇಬ್ಬರು ಪ್ರಶ್ನೆಗೆ ಉತ್ತರವಾಗಿ ನಿಂತು ಇನ್ನೊಬ್ಬರು ಪ್ರಶ್ನೆಯಾಗಿಯೇ ಉಳಿದು ಬಿಡುತ್ತಾರೆ. ಅಂತೆಯೇ ಇಲ್ಲಿಯ ಪ್ರಶ್ನೆಯ ಪ್ರಸಂಗದಲ್ಲಿ ಕ್ರಮವಾಗಿ ಪ್ರಶ್ನೆಯಾಗಿ ನಿಲ್ಲುತ್ತಾ ಬಂದಳು - ಲಲಿತೆ.

ಒಂದು ದಿನ ಮಧ್ಯಾಹ್ನ ಮಾಮೂಲಿನಂತೆ ಲಕ್ಷ್ಮೀಪತಯ್ಯ ದಿನದ ಪತ್ರಿಕೆಗಳನ್ನೋದುತ್ತಿದ್ದಾಗ, ಆತನಿಗೆ ಉಪಾಹಾರವನ್ನೂ ಟೀಯನ್ನೂ ಸುನೀತಿ ತೆಗೆದುಕೊಂಡು ಬಂದಳು. ಸುನೀತಿ ಅಲ್ಲಿಗೆ ಬಂದಂದಿನಿಂದ ಲಕ್ಷ್ಮೀಪತಯ್ಯನಿಗೆ ಆಕೆಯ ಮೇಲೆ ಅಧಿಕ ವಾತ್ಸಲ್ಯ. ಆಕೆಯೇ ತಿಂಡಿ ಮಾಡಿ ಕೊಡಬೇಕು ; ಟೀ ಮಾಡಿ ತರಬೇಕು. ಅಡಿಗೆಯವಳು ಮಾಡಿದರೆ ಆತನಿಗೆ ಸೇರದು. ಮಗಳು ಟೀ ಮಾಡಿಕೊಟ್ಟರೇನೆ ರುಚಿ. ಸ್ಕೂಲಿಗೆ ಸೇರು ಎಂದು ಎಷ್ಟು ಹೇಳಿದರೂ ಕೇಳದೆ, ಮನೆಗೆಲಸಗಳಲ್ಲಿಯೇ ನಿರತಳಾಗುತ್ತಾ ಬಂದಳು ಸುನೀತಿ. ಮಧ್ಯಾಹ್ನ ಲಕ್ಷ್ಮೀಪತಯ್ಯನಿಗೆ ತಿಂಡಿ ಟೀಗಳನ್ನು ಮಾಡಿಕೊಡುವುದು ಅವಳ ನಿತ್ಯಗಟ್ಟಲೆಯಾಗಿತ್ತು. ತಿಂಡಿ ತಟ್ಟೆಯನ್ನು ಲಕ್ಷ್ಮೀಪತಯ್ಯನ ಮುಂದಿನ ಮೇಜಿನ ಮೇಲಿಟ್ಟು ಹತ್ತಿರದ ಕುರ್ಚಿಯ ಮೇಲೆ ಕುಳಿತಳು. ಲಲಿತೆ ಎಂದಿನಂತೆ ಕಾಲೇಜಿಗೆ ಹೋಗಿದ್ದಳು.

ಅಷ್ಟುಹೊತ್ತಿಗೆ ಮನೆಯ ಆಳು ಒಳಗೆ ಬಂದು ಒಂದು ಲಕೋಟೆಯನ್ನು ಸುನೀತಿಯ ಮುಂದಿಟ್ಟು "ಶ್ರೀನಿವಾಸರಾಯರು ಇದನ್ನು ನಿಮಗೆ ಕೊಡು ಎಂದರು. ಮನೆಯಲ್ಲೇ ಇದಾರೆ, ಉತ್ತರಕ್ಕೆ ಕಾದಿದಾರೆಂದು ತಿಳಿಸು ಅಂದರು" ಎಂದು ಹೇಳಿ ಹೋದ.

ಲಕೋಟೆಯನ್ನು ನೋಡಿದ ಕೂಡಲೆ ಅದು ಯಾರಿಂದ ಬಂತೆಂಬು

ದನ್ನು ಸುನೀತಿ ಆಳು ಹೇಳುವುದಕ್ಕೂ ಮುಂಚೆಯೆ ಅರಿತಿದ್ದಳು— ಲಕೋಟೆಯ ಮೂಲೆಯಲ್ಲಿದ್ದ ಗುಲಾಬಿ ಹೂವಿನ ಮುದ್ರೆಯಿಂದ. ಎಷ್ಟೋ ವೇಳೆ ತಾನೂ ಲಲಿತೆಯೂ ಆತನ ಮನೆಗೆ ಹೋಗಿದ್ದಾಗ ಆತ ಉಪಯೋಗಿಸುತ್ತಿದ್ದ ಲಕೋಟೆಗಳ ಮೇಲೆಲ್ಲಾ ಆ ಗುಲಾಬಿ ಹೂವಿನ ಮುದ್ರೆಯನ್ನು ನೋಡಿದ್ದಳು.

ಸುನೀತಿ ಲಕೋಟೆಯನ್ನು ಹರಿದು ಕಾಗದದ ಮೇಲೆ ತನ್ನ ದೃಷ್ಟಿಯನ್ನು ಹರಿಸಿ ಸ್ವಲ್ಪಕಾಲ ಆ ಕಾಗದದಲ್ಲಿಯೆ ತಲ್ಲೀನಳಾದಳು. ಅನಂತರ ಗಂಭೀರಮುಖಿಯಾಗಿ, ಕುರ್ಚಿಯಿಂದೆದ್ದು ಲಕ್ಷ್ಮೀಪತಯ್ಯನ ಬಳಿ ನಿಂತು "ದೊಡ್ಡಪ್ಪಾ, ಶ್ರೀನಿವಾಸ ಸಭ್ಯ ಅಲ್ಲವೇ ?" ಎಂದು ಕೇಳಿದಳು.

"ಏಕಮ್ಮಾ. ಹೌದು .... ಹೌದು .... " ಎಂದು ಲಕ್ಷ್ಮೀಪತಯ್ಯ ಅದುವರೆಗೂ ಪರದೆಯಂತೆ ಮುಖದ ಮುಂದೆ ಹಿಡಿದುಕೊಂಡಿದ್ದ ಪತ್ರಿಕೆಯನ್ನು ಓರೆಮಾಡುತ್ತಾ, "ಖಂಡಿತ ಹೌದು....ನಾನು ಸಾಕಿ, ಸಲಹಿ ಬೆಳೆಸಿದೇನೆ" ಎಂದು ಒತ್ತಿ ಹೇಳಿದ.

''ಹಾಗಿದ್ದರೆ .... ಅವನು .... ನನ್ನಂಥವಳಿಗೆ .... ಅವಿವಾಹಿತ ಪ್ರೌಢ ಕನ್ಯೆಗೆ.... ಇತರರು ಓದಬಾರದಂತಹದೇನನ್ನೂ ಬರೆಯಲಾರ.... ಅಲ್ಲವೆ ?"

"ಎಲ್ಲಿ, ಬರೀಲಿ, ತೋರಿಸ್ತೇನೆ ಅವನಿಗೆ" ಲಂದು ಏನು ತೋರಿಸುತ್ತಿದ್ದನೋ ಅದನ್ನು ಸದ್ಯಕ್ಕೆ ಪತ್ರಿಕೆಯ ಮೇಲೆ ತೋರಿಸುತ್ತಾ ಅದನ್ನು ಹಿಸುಕಿ ಬಿಟ್ಟ.

"ಈ ಕಾಗದ ನೋಡು ದೊಡ್ಡಪ್ಪಾ, ನನಗೆ ಬರೆದು ಕಳುಹಿಸಿದಾನೆ. ಆದರೆ ನನಗೆ ಇದೇ ಮೊದಲನೆ ಕಾಗದ ಯಾರಾದರೂ ಬರೆದಿರೋದು. ನಾನು ಹೆಚ್ಚಾಗಿ ಪಟ್ಟಣಗಳಲ್ಲಿ ಇದ್ದವಳೂ ಅಲ್ಲ, ಇಲ್ಲಿಯ ರೀತಿಗಳ ಪರಿಚಯವೂ ಹೆಚ್ಚು ಇಲ್ಲ. ಈ ರೀತಿ ಕಾಗದ ಬರೆಯಬಹುದೋ ಬಾರದೋ ನನಗೆ ಗೊತ್ತಿಲ್ಲ. ಆದ್ದರಿಂದ ನೀವೂ ನೋಡಿ.''

ಕೆಂಪೇರಿದ ಮುಖವುಳ್ಳವನಾಗಿ ಲಕ್ಷ್ಮೀಪತಯ್ಯ, ಆತುರದ ಕೈಗಳಿಂದ ಆ ಕಾಗದವನ್ನು ಕಿತ್ತುಕೊಂಡು, ತನ್ನ ಕಣ್ಣುಗಳಿಂದ ಕಾಗದದ ಅಕ್ಷರಗಳನ್ನು ಮೂರು ನಾಲ್ಕು ಬಾರಿ ನುಂಗಿದ. ಅನಂತರ ನಿಧಾನವಾಗಿ "ಹೆದ

ರಿಸಿ ಬಿಟ್ಟಿದ್ದಲ್ಲವಮ್ಮಾ ನನ್ನನ್ನು. ನನಗೆ ಗೊತ್ತಿಲ್ಲವೆ ಶ್ರೀನಿವಾಸನ ಗುಣ. ಹಾಗೆಲ್ಲಾ ಸಿಕ್ಕಾಪಟ್ಟೆ ಬರೆಯುವವನಲ್ಲ ಅವನು. ಇದರಲ್ಲೇನಿದೆ, ಈ ಕಾಗದದಲ್ಲಿ, ಬರಿಯಬಾರದಂತಹುದು! ಸಂಜೆಗೆ, ನೀನೂ ಲಲಿತಾ ಇಬ್ಬರೂ ಲಾಲ್‌ಬಾಗಿಗೆ ಹೂಗಿಡಗಳ ಪ್ರದರ್ಶನಕ್ಕೆ ಬರುವಿರೇನು? ಬರುವಿರಾದರೆ ಕಾಲೇಜಿನಿಂದ ಜಾಗ್ರತೆ ಬರುತ್ತೇನೆ. ಉತ್ತರ ಬರೆದು ಕಳುಹಿಸು ಎಂತ ಬರೆದಿದ್ದಾನೆ. ಅಷ್ಟೆ. ಅದಕ್ಕೇನಂತೆ. ಇದರಲ್ಲಿ ಆಕ್ಷೇಪಣೆ ಮಾಡೋದು ಏನೂ ಇಲ್ಲ, ಕಾಗದದ ಹಾಳಾದ ಹಳದೀ ಬಣ್ಣ ಬಿಟ್ಟು. ಹಳದೀ ಕಂಡರೆ ನನಗೆ ಆಗೊಲ್ಲ.''

''ಹೋಗೋಣವೆ ದೊಡ್ಡಪ್ಪ?'' ಎಂದು ಆತುರದಿಂದ ಸುನೀತಿ ಕೇಳಿದಳು.

ಲಕ್ಷ್ಮೀಪತಯ್ಯ ಆಕೆಯ ತುಂಟಕೂದಲುಗಳನ್ನು ಸರಿಮಾಡುತ್ತಾ, ''ಹೋಗಿ ಹೋಗಿ, ಅದಕ್ಕೇನಂತೆ. ನಾನು ಈ ದಿನ ಹೇಗಿದ್ದರೂ ಹೊರಗೆ ಹೇಗೋದಿಲ್ಲ. ಕಾರಿನಲ್ಲಿ ಹೋಗಿ'' ಎಂದು ಹೇಳಿ, ಅನಂತರ ತಿಂಡಿಗೆ ಕೈ ಹಾಕಿದ.

''ನೀವೂ ಬನ್ನಿ ದೊಡ್ಡಪ್ಪ''

"ನಾನೇ ಕಾರಿನಲ್ಲಿ ಕುಳಿತರೆ ಶ್ರೀನಿವಾಸ ನಡಸದೇ ಬಿಡೊಲ್ಲ. ಅವನು ಗಾಡಿ ನಡಸಿದಾಗ ಒಂದು ಸಲ ನಾನೂ ಕಾರಿನಲ್ಲಿ ಕುಳಿತಿದ್ದೆ. ಅದೇ ಕಡೆ. ಪುನಃ ಅವನು ಗಾಡಿ ನಡಸಿದಾಗ ಕಾರಿನೊಳಗೆ ಇರೋದಿಲ್ಲ ನಾನು, ನಡೆದರೂ ಸರಿಯೆ. ಇಷ್ಟಕ್ಕೂ ಸಂಜೆಗೆ ಯಾರೋ ಬರುತ್ತಾರೆ, ಕೆಲವು ಮುಖ್ಯ ವಿಷಯಗಳನ್ನು ಮಾತಾಡಲಿಕ್ಕೆ. ನೀವು ಹೋಗಿ.''

ಸುನೀತಿ ಬಾಗಿಲಿಗೆ ಓಡಿದಳು. ಆಳನ್ನು ಕೂಗಿ ''ಶ್ರೀನಿವಾಸರಿಗೆ ಹೇಳು, ಸಂಜೆ ಆರು ಗಂಟೆಗೆ ಬರಬೇಕಂತೆ; ನಾನು ಲಲಿತಮ್ಮ ಇಬ್ಬರೂ ಸಿದ್ಧರಾಗಿರುತ್ತೇವೆ, ಅಂತ'' ಎಂದು ಹೇಳಿದಳು.

ಲಕ್ಷ್ಮೀಪತಯ್ಯ ತಾನು ಕೂತಿದ್ದ ಜಾಗದಿಂದಲೇ, "ಕಾಗದಕ್ಕೆ ಒಂದು ಮಾತು ಜವಾಬು ಬರೆದು ಕಳುಹಿಸಿದರಾಯ್ತು, ಆಳಿನ ಕೈಲಿ ಹೇಳಿ ಕಳುಹಿಸುವುದರ ಬದಲು'' ಎಂದ.

"ಏನು ಪರವಾ ಇಲ್ಲ ದೊಡ್ಡಪ್ಪ. ಶ್ರೀನಿವಾಸ ತಪ್ಪು ತಿಳಿದುಕೊಳ್ಳು ವುದಿಲ್ಲ" ಎಂದಳು ಸುನೀತಿ.

ಬಹುಶಃ ಎರಡು ತಿಂಗಳಾದರೂ ಕಳೆದಿರಬೇಕು. ಶ್ರೀನಿವಾಸನ ಪರೀಕ್ಷೆ ಮುಗಿದು, ಅವನು ತೇರ್ಗಡೆಯಾಗಿದ್ದ. ಲಕ್ಷ್ಮೀಪತಯ್ಯನ ಬಲದಿಂದ ದೊಡ್ಡ ಔಷಧಾಲಯವನ್ನು ಶೀಘ್ರದಲ್ಲೇ ಸ್ಥಾಪಿಸುವ ಏರ್ಪಾಡುಗಳನ್ನು ಮಾಡುತ್ತಿದ್ದ.

ಮೂವರ ಪ್ರಸಂಗದಲ್ಲಿ ಪ್ರಶ್ನೆಯಾಗಿಯೇ ನಿಲ್ಲುತ್ತಾ ಬರುವವರಿಗೆ ತಾವು ಹಾಗೆ ಆಗುತ್ತಾ ಬರುತ್ತಿರುವ ಅಂಶ ಸುಲಭದರಲ್ಲಿಯಾಗಲೀ ಶೀಘ್ರ ಯಾಗಲೀ ತಿಳಿಯುವುದಿಲ್ಲ. ಕ್ರಮವಾಗಿ ಅರಿವಾಗುತ್ತಾ ಬರುತ್ತದೆ. ಲಲಿತೆ ಈ ಸ್ಥಿತಿಯಲ್ಲಿದ್ದಳು.

ಒಬ್ಬಳೇ ಇದ್ದಳು ಕೊಠಡಿಯಲ್ಲಿ, ಒಂದು ದಿನ ಸಂಜೆ ಬಹಳ ಹೊತ್ತಿನ ಮೇಲೆ. ಲಕ್ಷ್ಮೀಪತಯ್ಯ ಸುನೀತಿ ಇಬ್ಬರೂ ಸಿನಿಮಾಕ್ಕೆ ಹೋಗಿದ್ದರು. ಲಲಿತೆ ಸಹ ಹೋಗಬೇಕೆಂದೇ ನಿಶ್ಚಯವಾಗಿತ್ತು. ಹೊರಡುವ ಸಮಯಕ್ಕೆ ಸರಿಯಾಗಿ ಲಲಿತೆ ತಲೆ ಭಾರವೆಂದು ಹೋಗಲಿಲ್ಲ. ಆಕೆಗೆ ನಿಜವಾಗಿಯೂ ತಲೆ ಭಾರವಾಗಿತ್ತು. ತಲೆನೋವಲ್ಲ. ಒಂದು ತರ ತಲೆಭಾರ. ಮೂವರ ಪ್ರಸಂಗದಲ್ಲಿ ತಾನು ಪ್ರಶ್ನೆಯಾಗಿಯೇ ಉಳಿಯುತ್ತಾ ಬಂದಿರುವ ಅರಿವಿನ ಭಾರ. ನಿಮಗೆ ತಿಳಿಯಲಿಕ್ಕಿಲ್ಲ ಅದು. ನೀವು ಒಂದು ವೇಳೆ ರೂಪವತಿಯ ರಾಗಿದ್ದರೆ, ನಿಮ್ಮ ಗಂಡನೋ ನಲ್ಲನೋ ಎಣ್ಣೆಗೆಂಪಿನ ಯುವತಿಯೊಡನೆ ಸದಾ ಇರುತ್ತಿರುವುದನ್ನು ನೋಡುತ್ತಿದ್ದರೆ ತಿಳಿಯುತ್ತದೆ, ಆ ತಲೆಭಾರ. ಅಂತು ಲಲಿತೆಗೆ ಆ ತಲೆಭಾರ ಬಂದು ಕೊಠಡಿಯಲ್ಲಿ ಕುಳಿತಿದ್ದಳು, ಬೇಜಾರಿನಿಂದ. ತೊಡೆಯ ಮೇಲೆ ಒಂದು ಪುಸ್ತಕ ತೆರೆದು ಬಿದ್ದಿತ್ತು. ಆದರೆ ಲಲಿತೆಯ ದೃಷ್ಟಿ ಅದರ ಮೇಲಿರಲಿಲ್ಲ. ಪಕ್ಕದ ಮೇಜಿನ ಮೇಲೆ ವಿಶ್ರಮಿಸುತ್ತಾ ಬಿದ್ದಿದ್ದ ತನ್ನ ಕೈಯತುದಿಯಲ್ಲಿ ಓಲಾಡುತ್ತಿದ್ದ ಒಂದು ಲಕೋಟೆಯ ಮೂಲೆಯಲ್ಲಿದ್ದ ಗುಲಾಬಿ ಹೂ ಮುದ್ರೆಯ ಮೇಲೆ ಅವಳ ದೃಷ್ಟಿ ನಟ್ಟಿತ್ತು. ಲಕೋಟೆ ಸುನೀತೆಗೆ ವಿಳಾಸಿತವಾಗಿತ್ತು. ಸುನೀತಿ ಸಿನಿಮಾಕ್ಕೆ ಹೋದ ಸ್ವಲ್ಪಹೊತ್ತಿನ ಮೇಲೆ ಆಳು ಅದನ್ನು ತಂದುಕೊಟ್ಟಿದ್ದ. ಅದರೊಳಗೆ ಬರೆದಿರುವುದನ್ನರಿಯಲು ತನ್ನ ಕೊರಳಲ್ಲಿದ್ದ ಮುತ್ತಿನ ಹಾರವನ್ನೇ ಕೊಟ್ಟುಬಿಡಲು ಸಿದ್ಧಳಾಗಿದ್ದಳು

ಲಲಿತೆ. ಲಕೋಟೆಗೆ ಭದ್ರವಾಗಿ ಅಂಟು ಹಾಕಿತ್ತು. ದೀಪಕ್ಕೆ ಎದುರು ಹಿಡಿದು ಕಾಗದವನ್ನು ಓದಲು ಯತ್ನಿಸುತ್ತಿದ್ದಳು. ಶ್ರೀನಿವಾಸ ದಪ್ಪನೆ ಲಕೋಟೆಗಳನ್ನೇ ಉಪಯೋಗಿಸುತ್ತಿದ್ದ ಕಾರಣ ಏನೂ ತಿಳಿಯಲಿಲ್ಲ.

ಒಂಭತ್ತುವರೆಗೆ ಅವರಿಬ್ಬರೂ ಸಿನಿಮಾದಿಂದ ಹಿಂದಿರುಗಿದರು. ಸುನೀತಿ ಬಟ್ಟೆ ಬದಲಾಯಿಸುವುದಕ್ಕೆ ಲಲಿತೆ ಇದ್ದ ಕೊಠಡಿಗೆ ಬಂದು ತಾನುಟ್ಟ ರೇಷ್ಮೆ ಸೀರೆಯನ್ನು ಬದಲಾಯಿಸಿ, ಅದನ್ನು ಮಡಿಸುತ್ತಾ "ಸಿನಿಮಾ ಚೆನ್ನಾಗಿತ್ತು ಲಲಿತಾ. ನೀನೂ ಬಂದಿದ್ದರೆ—" ಎಂದಳು.

"ನಾನು ಆ ಚಿತ್ರ ನೋಡಿದೇನೆ. ಚೆನ್ನಾಗಿದೆ. ನೀನು ಹೋದ ಮೇಲೆ ಬಂತು ಈ ಕಾಗದ. ಆಳು ತಂದುಕೊಟ್ಟ.''

"ಕಾಗದ! ಯಾರಿಂದ?'' ಎಂದು ರೇಷ್ಮೆ ಸೀರೆಯನ್ನು ಒಂದು ಮಡಿಕೆ ಮಡಿಸಿದಳು ಸುನೀತಿ, ಆ ಕಾರ್ಯದಲ್ಲೇ ಮಗ್ನಳಾಗಿ.

"ಯಾರೆ! ನಾನು ಹೇಗೆ ಹೇಳಲಿ. ಲಕೋಟೆ ಮೂಲೆಯಲ್ಲಿ ಒಂದು ಗುಲಾಬಿ ಹೂ ಮುದ್ರೆ ಇದೆ.''

"ಏನು ಬರೆದಿರಬಹುದೂ ಅಂತೀನಿ'' ಸುನೀತಿ ಸೀರೆಯನ್ನು ಬಹಳ ಎಚ್ಚರಿಕೆಯಿಂದ ಮಡಿಸುತ್ತಲೇ ಇದ್ದಳು.

"ನಾವೆಲ್ಲ ಒಂದೇ ಜಾತಿ, ಸುನೀತಿ. ಕಾಗದ ಒಡೆದು ಓದುವುದಕ್ಕೂ ಮುಂಚೆಯೇ ಆತುರ, ಏನಿರಬಹುದು ಅಂತ ತಿಳಿದುಕೊಳ್ಳುವುದಕ್ಕೆ. ಕಡೆಗೆ ಲಕೋಟೆ ಹರಿದು ಕಾಗದ ಓದುವುದೇ ಮಾರ್ಗ. ತಗೋ ಕಾಗದ'' ಎಂದು ಲಲಿತೆ ಕಾಗದವನ್ನು ಸುನೀತಿ ಇದ್ದೆಡೆಗೆ ಎಸೆಯಲು ಕೈ ಎತ್ತಿದಳು.

''ತಾಳು ತಾಳು. ಹಾಳು ಜರತಾರಿ. ಟೊಂಕದ ಸುತ್ತ ಸುತ್ತಿ ಕೊಂಡಿರುವ ಕಡೆ ಅಂಚೆಲ್ಲಾ ಮುರಿದುಹೋಗುತ್ತದೆ ಸಿಲ್ಕೆಲ್ಲಾ ಸುಕ್ಕು. ನಾನು ಇದನ್ನೆಲ್ಲಾ ಸರಿಮಾಡುವ ಹೊತ್ತಿಗೆ, ಎಲ್ಲಿ, ಆ ಕಾಗದ ಓದಿಬಿಡು. ಇಲ್ಲ ದಿದ್ದರೆ ಊಟಕ್ಕೆ ಹೊತ್ತಾಗುತ್ತದೆ. ದೊಡ್ಡಪ್ಪ ಕಾಯ್ತಾರೆ.''

''ಇದೇನು ಸುನೀತಿ! ಶ್ರೀನಿವಾಸ ನಿನಗೆ ಅಂತ ಬರೆದು ಕಳುಹಿಸಿದ ಕಾಗದವನ್ನು ನಾನು ಓದಲೆ? ಈ ಕಾಗದ ಇನ್ನಾರ ಕಣ್ಣಿಗೂ ಬೀಳೋದು ಅವನಿಗೆ ಇಷ್ಟವಿಲ್ಲ ಅಂತ ಕಾಣುತ್ತೆ."

ಸುನೀತಿ ಗಂಭೀರಳಾಗಿ ಲಲಿತೆಯ ಕಡೆಗೆ ತಿರುಗಿ ''ಇನ್ನೊಬ್ಬರು ಓದಬಾರದಂಥದನ್ನು ನನಗೆ ಬರೆಯಲು ಯಾರಿಗೂ ಸ್ವತಂತ್ರವಿಲ್ಲ. ಓದು ಲಲಿತ, ನೀನೇ ಓದು ಆ ಕಾಗದ. ಬಹುಶಃ ಲಾಲ್‌ಬಾಗಿಗೆ ಬನ್ನಿ ಅಂತ ಬರೆದಿರಬೇಕು ಅಷ್ಟೆ'' ಎಂದು ಅನಂತರ ಲಲಿತೆಯ ಕಡೆ ಬೆನ್ನುಮಾಡಿ ಜರತಾರಿ ಅಂಚನ್ನೂ ಸೀರೆಯ ಸುಕ್ಕನ್ನೂ ಸರಿಮಾಡಲಾರಂಭಿಸಿದಳು.

"ನೀನು ಓದು ಅಂದರೆ ಓದುತ್ತೇನೆ" ಎಂದು ಲಲಿತೆ ಲಕೋಟೆಯನ್ನು ಹರಿದು ಕಾಗದವನ್ನು ಹೊರಗೆ ಸೆಳೆದು ಅದನ್ನು ಮೊದಲು ತಾನು ಓದಿಕೊಂಡಳು. ಪುನಃ ಮತ್ತೊಮ್ಮೆ ಓದಿಕೊಂಡಳು. ಸುನೀತಿ ಈಕಡೆ ಗಮನ ಕೊಡದೆ ಸೀರೆಯನ್ನು ಸರಿಯಾಗಿ ಮಡಿಸುತ್ತಿದ್ದಳು.

ಒಂದು ಕ್ಷಣ ಲಲಿತೆ ಸುನೀತಿಯನ್ನು ನೋಡಿದಳು. ಅನಂತರ ಅವಳ ತುಟಿಯ ಮೇಲೆ ಕಿರಿಮಿಂಚೊಂದು ಮಿನುಗಿ ಕ್ರಮವಾಗಿ ಮಾಯವಾಯಿತು.

ಗಂಡಿಗೆ ಹೆಣ್ಣು ಅರಿಯಲಾಗದ ಪ್ರಶ್ನೆ. ದೊಡ್ಡದೊಂದು ತೆರೆ. ಹೆಣ್ಣು ಹೃದಯ, ಹೆಣ್ಣುಮನಸ್ಸು ಈ ತೆರೆಯ ಹಿಂದೆ. ಗಂಡಿಗೆ ಹೆಣ್ಣು ಬಿಡಿಸಲಾಗದ ಗಂಟು. ಆದರೆ ಹೆಣ್ಣಿಗೆ ಹೆಣ್ಣು ಬಹಳ ಸುಲಭ. ಒಂದು ಹೆಣ್ಣು ಇನ್ನೊಂದು ಹೆಣ್ಣನ್ನು ತೂರುನೋಟದಿಂದ ಅರಿತುಬಿಡುತ್ತಾಳೆ. ಹೆಣ್ಣು ಹೃದಯ, ಹೆಣ್ಣು ಮನಸ್ಸು, ಇನ್ನೊಂದು ಹೆಣ್ಣಿಗೆ ಗಾಜಿನ ಬೀರುವಿನಲ್ಲಿದ್ದಂತೆ. ಗಂಡಿಗೆ ಮಾತ್ರ ಆ ಬೀರು ಮೋಹಕವಾದ ತೆರೆ.

ಲಲಿತೆ ಮತ್ತೊಮ್ಮೆ ಒಂದು ಕ್ಷಣ ಕಾಲ ಸುನೀತಿಯನ್ನು ನೋಡಿದಳು. ಅವಳ ಕೈಲಿದ್ದ ಕಾಗದ ಉಯ್ಯಾಲಾಡಿತು. ನಂತರ ಅವಳ ಮುಖ ಸ್ವಲ್ಪ ಕೆಂಪೇರಿ, ಅವಳ ಧ್ವನಿ ಉಸುರಿಗಿಳಿದು, ''ನಿಜವಾಗಿ ನೀನು ಈ ಕಾಗದವನ್ನು ನನ್ನ ಕೈಲಿ ಓದಿಸಬಾರದಾಗಿತ್ತು ಸುನೀತಿ. ಖಂಡಿತ ಇದು ಮಟ್ಟಿಗೆ ಮತ್ತಾರಿಗೂ ತಿಳಿಯಬಾರದ ಕಾಗದ'' ಎಂದಳು.

ಮಡಿಸುತ್ತಿದ್ದ ಸೀರೆಯ ಮಡಿಕೆ ಹಾಗೇ ನಿಂತಿತು. ಸುನೀತಿ ಲಲಿತೆಯ ಕಡೆ ತಿರುಗಿ ನಿಂತು ''ಹಾಗಾದರೆ ಗಟ್ಟಿಯಾಗಿ ಓದಿಬಿಡು. ಹೇಗಿದ್ದರೂ ಓದಿದೀಯೆ. ಇನ್ನು ಗುಟ್ಟೆಲ್ಲಿದೆ? ಶ್ರೀನಿವಾಸ ಇನ್ನೊಬ್ಬರಿಗೂ ತಿಳಿಯಬಾರ

ದಂಥದನ್ನು ನನಗೆ ಬರೆದರೆ, ಅದೇ ಕಾರಣ ನನಗೆ, ಅದನ್ನು ಪ್ರಚುರ ಪಡಿಸಲಿಕ್ಕೆ" ಎಂದಳು.

''ನಾನೇನು ಮಾಡಲಿ ಈಗ. ನಿನ್ನ ಬಲವಂತಕ್ಕೆ ಓದುತ್ತೇನೆ ಅಷ್ಟೆ. ಕೇಳು. ಕಾಗದ ಹೀಗಿದೆ : ''ಪ್ರಿಯೆ ಸುನೀತಿ— ಇವತ್ತು ರಾತ್ರಿ ಹನ್ನೆರಡು ಗಂಟೆಗೆ ನನ್ನ ಮನೆಗೆ ಬಾ. ಖಂಡಿತ ಬಾ.'' ಇಷ್ಟೆ ಕಾಗದದಲ್ಲಿ ಬರಿದಿರುವುದು.''

ಕಾಗದವನ್ನು ಓದಿ ಲಲಿತೆ ಎದ್ದು ಬಂದು, ಸುನೀತಿ ಮಡಿಸುತ್ತಿದ್ದ ಸೀರೆಯ ಮೇಲೆ ಕಾಗದವನ್ನು ಹಾಕಿ "ನೀನು ಈ ಕಾಗದವನ್ನು ನನ್ನ ಕೈಲಿ ಓದಿಸಬಾರದಾಗಿತ್ತು. ನಾನು ಓದಿಲ್ಲ ಅಂತ ತಿಳಿದುಕೊಂಡು ಬಿಡು. ಅದೂ ಶ್ರೀನಿವಾಸ ನಿನಗೆ ಹೀಗೆ ಏಕೆ ಬರೆದನೋ ನನಗೆ ತಿಳಿಯಲಿಲ್ಲ. ಏನೋ ತಪ್ಪಿರಬೇಕು. ನೀನು ಮಾತ್ರ, ನಾನು ಕಾಗದ ಓದಲಿಲ್ಲ ಅಂತ ತಿಳಿದುಕೋ. ನನಗೆ ತಲೆಭಾರ. ಊಟ ಮಾಡುವುದಿಲ್ಲ. ದೊಡ್ಡಪ್ಪನಿಗೆ ಹೇಳಿಬಿಡು" ಎಂದು ತನ್ನ ಕೊಠಡಿಗೆ ಹೋದಳು.

ಊಟವಾದ ನಂತರ ಲಕ್ಷ್ಮೀಪತಯ್ಯ ಮಲಗಿಬಿಟ್ಟ. ಹಾಲಿನಲ್ಲಿದ್ದ ಗಡಿಯಾರ ಕ್ರಮವಾಗಿ ಹನ್ನೆರಡು ಗಂಟೆ ಹೊಡೆಯಿತು. ಸುನೀತಿ ತನ್ನ ಕೊಠಡಿಯಿಂದ ಮೆಲ್ಲನೆ ಹೊರಟ. ಪಕ್ಕದ ಹಿತ್ತಿಲ ಬಾಗಿಲಿನಿಂದ ತೋಟದೊಳಗೆ ಬಂದು, ಅಲ್ಲಿಂದ ರಸ್ತೆಗೆ ಬಂದಳು. ಶ್ರೀನಿವಾಸನ ಮನೆ, ರಸ್ತೆಯ ಕಡೆಯಲ್ಲಿ ನಾಲ್ಕು ಫರ್ಲಾಂಗ್ ದೂರದಲ್ಲಿತ್ತು. ರಸ್ತೆಯಲ್ಲಿ ಅವಳ ವಿನಾ ಮತ್ತಾರೂ ಇರಲಿಲ್ಲ. ದೂರದಲ್ಲಿ ನಾಯಿಯೊಂದು ಬೊಗಳಿತು. ಸಣ್ಣ ಹನಿ ಬೀಳುತ್ತಿತ್ತು. ಶ್ರೀನಿವಾಸನ ಮನೆಗೆ ಸುನೀತಿ ಓಡಿದಳು. ಶ್ರೀನಿವಾಸನ ಮನೆ ಬಾಗಿಲು ಹಾಕಿತ್ತು. ಸುನೀತಿ ಬಾಗಿಲನ್ನು ಗಟ್ಟಿಯಾಗಿ ಮೂರು ನಾಲ್ಕಾವರ್ತಿ ತಟ್ಟಿದಳು. ಎಷ್ಟೋ ಸಾರಿ ಆ ಮನೆಗೆ ಅವಳು ಲಕ್ಷ್ಮೀಪತಯ್ಯನೊಡನಾಗಲಿ ಲಲಿತೆಯೊಡನಾಗಲಿ ಬಂದಿದ್ದು, ಸ್ಥಳ ಪರಿಚಯವಾದ್ದರಿಂದ ಬಾಗಿಲು ತಟ್ಟುವಾಗಲೂ ಒಂದು ತರದ ಧೈರ್ಯವಿತ್ತು.

''ಯಾರು ? ಬಂದೆ........ ಬಂದೆ'' ಎಂದು ಒಳಗಿನಿಂದ ಶ್ರೀನಿವಾಸ ಕೂಗುತ್ತ ಹೊರಗಡೆಯ ದೀಪದ ಗುಂಡಿಯನ್ನು ಒತ್ತಿ ಬಾಗಿಲು

ತೆಗೆದ. ಏನನ್ನೋ ಬರೆಯುತ್ತ ಕುಳಿತಿದ್ದನೆಂದು ಕಾಣುತ್ತದೆ- ಕೈಲಿ ಲೇಖನಿ ಹಿಡಿದುಕೊಂಡೇ ಬಂದಿದ್ದ. ಬಾಯಲ್ಲಿ ಸಿಗರೇಟಿನ ತುಂಡು ಇತ್ತು. ಬಾಗಿಲು ತೆಗೆದು ಸುನೀತಿಯನ್ನು ನೋಡಿದೊಡನೆ ಬಾಯಲ್ಲಿರುವ ಸಿಗರೇಟಿನ ತುಂಡು ಕೆಳಗೆ ಉದುರಿ ಬಿದ್ದಿತು.

''ಹನ್ನೆರಡಾಗಿದೆ ಅಲ್ಲವೆ? ಹನ್ನೆರಡು ಗಂಟೆ ಹೊಡೆದ ಮೇಲೇ ನಾನು ಮನೆಯಿಂದ ಹೊರಟದ್ದು. ಸಾಯಂಕಾಲ ದೊಡ್ಡಪ್ಪ ನಾನು ಇಬ್ಬರೂ ಸಿನಿಮಾಕ್ಕೆ ಹೋಗಿದ್ದೆವು. ಇಗೋ ನಿನ್ನ ಇಷ್ಟ ಪ್ರಕಾರ ಬಂದಿದ್ದೇನೆ" ಎಂದು ಸುನೀತಿ ಒಳಗೆ ಹೆಜ್ಜೆ ಇಟ್ಟಳು.

ಶಿಲಾಪ್ರತಿಮೆಯಾಗಿ ನಿಂತಿದ್ದವನಿಗೆ ಕ್ರಮವಾಗಿ ಜೀವ ಬಂದು, ಗಹನ ವಿಚಾರವನ್ನು ಮಥಿಸುತ್ತಿರುವವನಂತೆ ಕಂಡುಬಂದ - ಶ್ರೀನಿವಾಸ. ಇಬ್ಬರೂ ಒಳಗೆ ಹೋದರು. ಕುರ್ಚಿಯ ಮೇಲೆ ಕುಳಿತುಕೊಂಡು, ಸುನೀತಿ "ಬಾ ಅಂತ ಕಾಗದದಲ್ಲಿ ನೀನು ಬರೆದಿದ್ದುದರಿಂದ ಬಂದೆ. ಬಾ ಅಂತ ಏತಕ್ಕೆ ಬರೆದಿದ್ದೆ ?" ಎಂದು ಕೇಳಿದಳು.

"ನನ್ನ ಕಾಗದ- ಓದಿದೆಯಾ" ಎಂದು ಉಸಿರು ಸಿಕ್ಕಿಕೊಂಡವನಂತೆ ಶ್ರೀನಿವಾಸ ಕೇಳಿದನು.

"ಲಲಿತೆ ಮೊದಲು ಓದಿ ಹೇಳಿದಳು. ನಾನೇ ಓದು ಎಂದೆ. ಆಮೇಲೆ ನಾನೂ ನೋಡಿದೆ. 'ಇವತ್ತು ರಾತ್ರೆ ಹನ್ನೆರಡು ಗಂಟೆಗೆ ನನ್ನ ಮನೆಗೆ ಬಾ ; ಖಂಡಿತ ಬಾ' ಎಂದು ಸ್ಪಷ್ಟವಾಗಿ ನೀನು ಬರೆದಿದ್ದೆ. ನಿನಗೆ ಮೈಯಲ್ಲಿ ಹುಷಾರಿಲ್ಲವೇನೋ, ಹನ್ನೆರಡು ಗಂಟೆಗೆ ಸರಿಯಾಗಿ ಔಷಧಿ ತೆಗೆದು ಕೊಳ್ಳುವುದಿದೆಯೇನೋ ಎಂದುಕೊಂಡೆ. ನಿನಗೆ ದೇಹಾಲಸ್ಯ ಇರುವ ಹಾಗೆ ಕಾಣುವುದಿಲ್ಲ.''

''ಹಾ.... ಹೌದು.... ಹೌದು...." ಎಂದು ನಿಧಾನವಾಗಿ ಶ್ರೀನಿವಾಸ ಒಂದೊಂದೇ ಮಾತನ್ನು ಹೇಳಿ, ಅನಂತರ ಒಂದು ನಿಮಿಷ ಆಲೋಚನಾಪರ ನಾಗಿ, ಏನನ್ನೋ ನಿಶ್ಚಯಿಸಿ, ಪುನಃ ಹೇಳಿದ: "ಹೇಳ್ತೀನೆ ಕೇಳು, ಸುನೀತಿ – ನನ್ನನ್ನು ಮದುವೆ ಆಗ್ತೀಯಾ ?"

ಸುನೀತಿ ಅರಳಿದ ಕಣ್ಣುಗಳಿಂದ ಅವನನ್ನು ನೋಡಿದಳು. ಅವನು ಅವಳ ನೋಟವನ್ನು ಗಂಭೀರವಾಗಿ ಶಾಂತವಾಗಿ ನಿಶ್ಚಲಿತವಾಗಿ ಇದಿರುಗೊಂಡ. ಸುನೀತಿ ಅವನ ಬಳಿಗೆ ಬಂದು, ಮೃದುವಾದ ಆಕ್ಷೇಪಣೆಯಿಂದ "ಹೂ ಅಂತ ಅನ್ನುವುದಕ್ಕೆ ಸಿದ್ಧಳಾಗಿದೇನೆ ಅಂತ ಇಷ್ಟು ದಿವಸಗಳಾದರೂ ತಿಳಿಯಲಿಲ್ಲವೆ?" ಎಂದು ಕೆಣಕಿದಳು.

"ನಾಳೆ ಬೆಳಿಗ್ಗೆ ಮಾವನಿಗೆ ಈ ಸಮಾಚಾರ ತಿಳಿಸಿಬಿಡಬೇಕು. ಇಲ್ಲದಿದ್ದರೆ ಅನಾಹುತ ಆಗುತ್ತದೆ. ನನ್ನನ್ನು ದತ್ತು ತೆಗೆದುಕೊಳ್ಳಲಿಕ್ಕೆ ಏರ್ಪಾಡು ಮಾಡುತ್ತಿದಾನೆ ಮಾವಯ್ಯ. ಹಾಗಾದಲ್ಲಿ ನಾವಿಬ್ಬರೂ ಲಗ್ನ ಆಗೋ ಹಾಗಿಲ್ಲ. ಈಗ ಒಂದು ಕಾಗದ ಬರೆದುಕೊಡುತ್ತೇನೆ. ಅದನ್ನು ಮಾವಯ್ಯನಿಗೆ ಕೊಟ್ಟುಬಿಡು, ಬೆಳಗ್ಗೆ ಎದ್ದ ತತ್‌ಕ್ಷಣ. ನಮ್ಮ ಸಿರ್ಧಾರ ಅವರಿಗೆ ತಿಳಿಯುತ್ತದೆ. ಮನೆಮಗಳು ನೀನಿರುವಾಗ, ದತ್ತು ಬೇಡ ಅಂದರೆ ಒಪ್ಪಲೂ ಬಹುದು" ಎಂದು ಹೇಳಿ ಶ್ರೀನಿವಾಸ ಒಂದು ಕಾಗದವನ್ನು ಬರೆದು ಸುನೀತಿ ಕೈಯಲ್ಲಿ ಕೊಟ್ಟು "ಓದು, ಸರಿಯಾಗಿದೆಯೇನೋ ನೋಡೋಣ" ಎಂದ.

ಸುನೀತೆಯ ಕಣ್ಣುಗಳಲ್ಲಿ ನೀರು ಒತ್ತರಿಸಿದವು. ಕಾಗದವನ್ನು ಮೇಜಿನ ಮೇಲೆ ಹಾಕಿ, ಅವಳು "ನಾನೇ ಹೇಳಬೇಕು ಅಂತಿದ್ದೆ, ನೀನು ಈ ಕಾಗದವನ್ನು ನನ್ನ ಕೈಗೆ ಕೊಡುವುದಕ್ಕೆ ಮುಂಚೆ. —ನೀನು ಕಾಗದ ಬರೆದು ನನಗೆ ಓದು ಎಂದು ಹೇಳುತ್ತೀ ಎಂದು ತಿಳಿಯಲಿಲ್ಲ —ಆದರೂ ನಾನೇ ಹೇಳಬೇಕು ಎಂದಿದ್ದೆ—ಖಂಡಿತ ಮುಂಚೆಯೇ ತಿಳಿಸುತ್ತಿದ್ದೆ. ನನ್ನ ತಂದೆ ಸಿಂಹಳ ದ್ವೀಪಕ್ಕೆ ಹೋದ ಸ್ವಲ್ಪ ವರ್ಷಗಳಲ್ಲೇ ನನ್ನ ತಾಯಿ ಸತ್ತುಹೋದರು. ನಮ್ಮ ತಂದೆಯವರಿಗೆ ಅವರ ತಿರುಗಾಟ, ಕಷ್ಟ, ಕ್ಲೇಶಗಳ ಮಧ್ಯೆ ನನಗೆ ಓದುಬರಹ ಕಲಿಸಲಿಕ್ಕೆ ಆಗಲೇ ಇಲ್ಲ. ನಾನೂ ಕಲಿಯಲು ಸಾಧ್ಯವಾಗಲಿಲ್ಲ. ಅದ್ದರಿಂದ ನನ್ನ ಲಗ್ನ ...." ಎಂದಳು.

ಶ್ರೀನಿವಾಸ ಅಡ್ಡಬಂದು "ಆದ್ದರಿಂದಲೇ ನಿನ್ನ ಲಗ್ನ ಆಗುತ್ತೇನೆ. ಓದು ಬರಹ ಕಲಿಸುತ್ತೇನೆ" ಎಂದು ನಸುನಗುತ್ತಾ ಹೇಳಿ ಅವಳ ಎರಡು ಗಲ್ಲಗಳನ್ನೂ ಹಿಡಿದು ಮುಖವನ್ನೆತ್ತಿದ.

ಸುನೀತಿಯನ್ನು ಮನೆತನಕ ಕರೆದುಕೊಂಡು ಬಂದು ಗೇಟಿನ ಬಳಿ ಬಿಟ್ಟು, ಹಿಂದಿರುಗುವಾಗ ಶ್ರೀನಿವಾಸ, "ಸುನೀತಿ, ನಾನು ಇವತ್ತು ಸಂಜೆ ಕಳುಹಿಸಿದ ಕಾಗದದಲ್ಲಿ ಏನು ಬರೆದಿದ್ದೆ ಗೊತ್ತೆ ?"

"ಏನು ?"

"ಒಂದೂ ಅಕ್ಷರ ತಪ್ಪದೆ ಹೇಳ್ತೀನೆ ಕೇಳು. 'ಗೆಳತಿ ಸುನೀತಿ—ನೀನು ಹೇಳಿದ್ದು ಸರಿ. ಹೂವಿನ ಹೆಸರು ಸೌಗಂಧ. ಅದನ್ನೇ ದ್ರೌಪದಿ ಬಯಸಿದ್ದು' ಅಂತ ಬರೆದಿದ್ದೆ."

"ಈಗೇನಾಯ್ತು. ಲಲಿತೆಯ ತಂತ್ರ ಅವಳ ಮೇಲೇ ತಿರುಗಿ, ನನಗೆ ಈ ಸೌಗಂಧ ಹೂ ಸಿಕ್ಕಿತು" ಎಂದು ಸುನೀತಿ ಶ್ರೀನಿವಾಸನ ಕಡೆ ಕೈತೋರಿಸಿ, ಮನೆಯೊಳಕ್ಕೆ ಹೋದಳು.

——::——

School and Schools

